

ಅಲ್ಲಾ ಹೋ ಅಕ್ಬರ್

# ಕಿಡಿ

ಶ್ರೀಮಾನ್

" ಶ್ರೀನಿವಾಸ "ರ ಮುನ್ನುಡಿಯೊಡನೆ

---


ಅ. ನ. ಕೃಷ್ಣರಾಯ.


---


ಪ್ರಕಾಶಕರು

ವಿ. ಜಿ. ಟಿ. ಜನರಲ್ ಏಜನ್ಸಿ

ಬಳೇಪೇಟೆ

ಬೆಂಗಳೂರು ನಗರ.


ಆರು ಕಥೆಗಳನ್ನೊಳಗೊಂಡಿದೆ] [ಬೆಲೆ ಹನ್ನೆರಡಾಣೆಗಳು

## ಈ ಲೇಖಕರ ಇತರ ಗ್ರಂಥಗಳು

ಕಥೆ:—

* ಮಿಂಚು
ಕನಸು

ನಾಟಕ:—

* ಮಮತೆಯೋ—ಮನೆಹಾಳೋ ?
* ಆಹುತಿ
* ಆಪತ್ತೇನು
ಗೋಮುಖವ್ಯಾಘ್ರ
ಯೋಷಿ
ಸೂಳೆ

ನ್ಯಾಸ:—

* ಹೊಸ ಹುಟ್ಟು
* ರಾಜಾ ರವಿವರ್ಮ
ನಾಟ್ಯಕಲಾ
ಚಿತ್ರಕಲಾ

ಜೀವನಚರಿತ್ರೆ:—

ಕಬೀರ್
ಟಾಲಸ್ಟಾಯ್

* ಈ ಗುರುತಿನವು ಈಗಾಗಲೇ ಪ್ರಕಟವಾಗಿವೆ.



ಮುದ್ರಣಕಾರರು

ಬಿ. ಶ್ರೀನಿವಾಸಯ್ಯಂಗಾರ್,

೩/೩೪ ಮನವಾರ್ತೆಪೇಟೆ, ಬೆಂಗಳೂರು ನಗರ.

# ಮುನ್ನುಡಿ

ನನ್ನ ತರುಣಮಿತ್ರರಾದ ಶ್ರೀಮಾನ್ ಅ. ನ. ಕೃಷ್ಣರಾಯರ ಈ ಸಣ್ಣಕತೆಗಳ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಬಹಳ ಸಂತೋಷದ ವಿಷಯವಾಗಿದೆ.

ಹೊಸಗನ್ನಡದ ಸ್ವತಂತ್ರ ಸಾಹಿತ್ಯ ಆರಂಭವಾಗಿ ಈಗ ಇನ್ನೂ ಮೂವತ್ತು ವರುಷವಾಗಿಲ್ಲ. ಅದನ್ನು ಆರಂಭಿಸಿದವರು ಕನ್ನಡ ಸಾಹಿತ್ಯದ ಅಭಿಮಾನಿದೇವಿ ತಮ್ಮ ಕೈಯನ್ನು ಯಾವ ಕೆಲಸಕ್ಕೆ ಹೂಡಿದಳು ಎಂಬುದನ್ನು ತಾವೇ ತಿಳಿದಿದ್ದಿರಲಾರರು. ಈ ಮೂವತ್ತು ವರುಷದಲ್ಲಿ ಸೃಷ್ಟಿಯಾಗಿರುವ ಗ್ರಂಥಸಮುದಾಯದಿಂದ ಆ ಕೆಲಸದ ಸ್ವರೂಪ ಜನರಿಗೆ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆ, ಗ್ರಂಥಕರ್ತರೂ ಅದನ್ನು ಅರಿತುಕೊಳ್ಳುತ್ತಿದ್ದಾರೆ. ಕನ್ನಡದ ಜನದ ಜೀವನಕ್ಕೆ ಮಾತಿನಲ್ಲಿ ರೂಪುಕೊಡುವುದು, ಅದರ ಸಹಾಯದಿಂದ ಆ ಜೀವನದ ರೂಪನ್ನು ಹೊಸದು ಮಾಡುವುದು, ಇದು ಈ ಸಾಹಿತ್ಯದ ಉದ್ದೇಶ. ಎಲ್ಲ ಸಾಹಿತ್ಯದ ಉದ್ದೇಶವೂ ಇದೇ. ಆದರೆ ಸಾಹಿತ್ಯ ಸೇವಕನು ಎಲ್ಲ ವೇಳೆಯಲ್ಲಿಯೂ ಈ ಉದ್ದೇಶವನ್ನು ನೆನೆಯುತ್ತ ಕೆಲಸಮಾಡುವುದಿಲ್ಲ. ಹಾಗೆ ನೆನೆಯುತ್ತ ಕೆಲಸಮಾಡುವುದು ಸಾಧ್ಯವೂ ಅಲ್ಲ, ಅವಶ್ಯಕವೂ ಅಲ್ಲ. ಸಾಹಿತ್ಯ ಸೇವಕನು ಹಿಂದಿನಿಂದ ಬಂದ ಒಂದು ಪದ್ಧತಿಗಾಗಿ ಬರೆಯದೆ ತನ್ನ ಮನಸ್ಸಿನ ಕಲಕು ಕುಲುಕುಗಳನ್ನು, ಸೃಷ್ಟಿಯ ಲೀಲೆಯಲ್ಲಿ ತಾನು ನೋಡಿದ ದೃಶ್ಯದ ಚಿತ್ರವನ್ನು, ಮಾತಿನಲ್ಲಿ ವಿವರಿಸಿದರೆ ಈ ಉದ್ದೇಶ ಅದರಲ್ಲಿ ತಾನಾಗಿ ಸೇರಿಬರುತ್ತದೆ. ತನ್ನ ಭಾಗದ ಕೆಲಸವನ್ನು ತನ್ನಿಂದಾದಷ್ಟು ಚೆನ್ನಾಗಿ ಮಾಡುವ ಜೇನು ಹುಳುವಿನ ಹಾಗೆ ಇವನು ತಾನೇ ಅರಿಯದ ಒಂದು ಹಿರಿಯ ಕಾರ್ಯದ ಸಾಧನೆಯಲ್ಲಿ ನೆರವಾಗುತ್ತಾನೆ. ಇದರಿಂದ ಅವನ ಜನ್ಮ ಸಾರ್ಥಕವಾಗುತ್ತದೆ; ಅವನ ನುಡಿಯ ಸಾಹಿತ್ಯ ಬೆಳೆಯುತ್ತದೆ; ಅವನ ಜನದ ಜೀವನ ಹಸನಾಗುತ್ತದೆ.

ಕನ್ನಡದ ಸಾಹಿತ್ಯವು ಹಿಂದಣಿಂದ ಬಂದ ಪದ್ಧತಿಗಾಗಿ ಬರೆಯುವ ಈಗಣ ಹೊಸದಾರಿಯಲ್ಲಿ ಅಡಿಯಿಡುವುದಕ್ಕೆ ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕವು ಮುಖ್ಯ ಕಾರಣವಾಯಿತೆನ್ನುವುದು ನಿರ್ವಿವಾದವಾದ ಮಾತು. ನವ್ಯತೆಯ ಸುಖ ದೊರೆಯಲೆಂದು ಗಾಯಕನು ಹಳೆಯ ಹಾಡು ಚೆನ್ನಾಗಿದ್ದರೂ ಹೊಸ ಹಾಡನ್ನು ಹಾಡುವಂತೆ ಅಥವಾ ಹಿಂದೆ ಹಾಡುತ್ತಿದ್ದ ಹಾಡನ್ನೇ ಬೇರೊಂದು ದಾರಿಯಲ್ಲಿ ನುಡಿಯುವಂತೆ ನಮ್ಮ ಗ್ರಂಥಕರ್ತರು ತಮ್ಮ ಕಾರ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯಗಳ ರೂಪಗಳನ್ನು ಸ್ವೀಕರಿಸಿದರು. ಪಾಶ್ಚಾತ್ಯ ದೇಶಗಳಲ್ಲಿ ಹೊಸಯುಗವು ಆರಂಭವಾಗಿ ಈಗ ಸುಮಾರು ಮುನ್ನೂರುವರುಷ ಆಗಿದೆ. ಈ ಕಾಲದಲ್ಲಿ ಅಲ್ಲಿಯ ಜನದ ಜೀವನ ಬಹುಮುಖವಾದಂತೆ ಅದರ ಬಿಂಬ ವಾಗಿ ಅಲ್ಲಿಯ ಸಾಹಿತ್ಯವು ಅನೇಕ ಬಾಹು ಅನೇಕ ಉದರ ಅನೇಕ ವಕ್ತ್ರ ನೇತ್ರಗಳನ್ನು ಅಳವಟ್ಟು ವಿಶ್ವರೂಪಿಯಾಗಿದೆ. ನಮ್ಮ ಸಾಹಿತ್ಯದಲ್ಲಿ ನಾವು ಉಪಯೋಗಿಸಿರುವುದು ಅಲ್ಲಿಯ ರೂಪಗಳಲ್ಲಿ ಕೆಲವನ್ನು ಮಾತ್ರ. ಇವು ಒಂದು ದೃಷ್ಟಿಯಿಂದ ನೋಡಿದರೆ ಹೊಸವು, ಒಂದು ದೃಷ್ಟಿಯಿಂದ ಹಳೆಯವು. ಬರಹದ ದೇಹ ಹಿಂದಿನದು; ಅದು ವಸ್ತ್ರ ಧರಿಸಿರುವ ರೀತಿಬೇರೆ. ಕೆಲವುವೇಳೆ ವಸ್ತ್ರದ ಬಣ್ಣ ರಚನೆ ಬೇರೆ. ಕೆಲವುವೇಳೆ ಅದೇ ವಸ್ತ್ರ; ಸೆರಗು ಬಲತೋಳಿನಮೇಲೆ ಬರುವುದಕ್ಕೆ ಬದಲಾಗಿ ಎಡತೋಳಿನಮೇಲೆ ಬಂದಿರುತ್ತದೆ. ಹಳೆಯದು ಅಂಗರೇಕು, ಕಸೆ; ಹೊಸದು ಅಂಗಿ, ಗುಂಡಿ.

ಹೀಗೆ ನಮ್ಮ ಹೊಸ ಸಾಹಿತ್ಯದಲ್ಲಿ ಈಗ ಬೆಳೆಯುತ್ತಿರುವ ರೂಪಗಳಲ್ಲಿ ಮುಖ್ಯವಾದುವು ಎರಡು: ಸಣ್ಣಕತೆ ಮತ್ತು ವ್ಯಂಜಕ ಗೀತ. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಕೂಡ ಈ ರೂಪಗಳು ಪ್ರಮುಖವಾದುವೇ. ಅಲ್ಲಿ ಇವುಗಳ ಜೊತೆಗೆ ನಾವೆಲು ನಾಟಕ ಉಪನ್ಯಾಸ ಇವೂ ಬಹಳ ಬೆಳೆದಿವೆ. ಇಲ್ಲಿ ಇವು ಇನ್ನೂ ಅಷ್ಟಾಗಿ ಬೆಳೆದಿಲ್ಲ. ಸಣ್ಣಕತೆ ಗೀತಗಳು ಸಾಹಿತ್ಯದಲ್ಲಿ ಪ್ರಮುಖವಾಗುವುದಕ್ಕೆ ಹಲವು ಕಾರಣ ಇವೆ. ಅವುಗಳಲ್ಲಿ ಮುಖ್ಯವಾದದ್ದು ಏನೆಂದರೆ, ಯಾವ ಒಂದು ಭಾವನೆಗಾಗಲಿ ಈ ರೂಪಗಳಲ್ಲಿ ಶುದ್ಧವಾಗಿ ಆಕಾರವನ್ನು ಕೊಡುವುದು ಸಾಧ್ಯ. ಬಲ್ಲವನ ಕೈಯಲ್ಲಿ ಇವು ಹದವಾದ ಉಕ್ಕಿನಂತೆ ತಿರುಗಿಸಿದ ಕೆಲಸಕ್ಕೆ ಹದವಣಾಗುತ್ತವೆ. ಇವುಗಳನ್ನು ನಡೆಯಿಸುವುದಕ್ಕೆ ಬಹಳ ಸನ್ನಾಹ ಬೇಕಿಲ್ಲ. ದೊಡ್ಡಕತೆ ದೊಡ್ಡಕಾವ್ಯ ಆನೆಯಹಾಗೆ;

ಸಣ್ಣ ಕತೆ ಗೀತಗಳು ಹಾವಿನಹಾಗೆ. ಎಂಥ ಮಾವುತನಾದರೂ ಆನೆಯನ್ನು ತಡೆಯುವುದಕ್ಕೆ ಹೆಚ್ಚು ಯತ್ನಮಾಡಬೇಕು; ಹಾವನ್ನು ತಡೆಯುವುದಕ್ಕೆ ಒಂದು ಜೀನಿಯ ಬುರುಡೆ ಸಾಕು. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಸಣ್ಣಕತೆಯು ನೂರಾರು ರೀತಿಯಲ್ಲಿ ನೂರಾರು ಭಾವವನ್ನು ಚಿತ್ರಿಸುವುದಕ್ಕೆ ಉಪಯೋಗಿ ಸಲ್ಪಟ್ಟಿದೆ. ಅದರ ಆ ಪ್ರಸಾರವನ್ನು ತಿಳಿಯಬೇಕಾದರೆ ಆ ಸಾಹಿತ್ಯಗಳ ಪರಿಚಯವನ್ನೇ ಮಾಡಿಕೊಳ್ಳಬೇಕು. ಅದು ಅಲ್ಲಿ ಹಬ್ಬಿರುವ ರೀತಿಯನ್ನು ನೋಡಿದವರು ಸಣ್ಣ ಕತೆಯ ಶಕ್ತಿಗೆ ಮನಸೋತು ನಮ್ಮ ಸಾಹಿತ್ಯದಲ್ಲಿ ಈ ಐಶ್ವರ್ಯವೆಂದಿಗೆ ಬರುವುದೋ ಎಂದು ಹಂಬಲಿಸುವರು.

ಈ ಹಂಬಲು ಬಹುಕಾಲ ಹಂಬಲಾಗಿ ಇರತಕ್ಕದ್ದೇ. ಇದು ಬೇಗನೆ ತೀರಲಾರದು. ಈಗ ನಾವು ಮಾಡಿರುವುದು ನೂರರಲ್ಲಿ ಒಂದು ಭಾಗವಿರಬಹುದು. ಮಾಡದೆ ಇರುವುದು ತೊಂಬತ್ತ ಒಂಭತ್ತು. ಈಮಧ್ಯೆ ಇದು ಮೊಳಕೆಯಾಗಿರುವಾಗಲೇ ಇದರ ವಿಷಯದಲ್ಲಿ ನಮ್ಮಲ್ಲಿ ಕೆಲವರಿಗೆ ಜುಗುಪ್ಸೆ. ಬಹಳ ವರ್ಷಗಳ ಹಿಂದೆ ಗಣಿತಶಾಸ್ತ್ರದಲ್ಲಿ ಎಂ. ಎ., ಪರೀಕ್ಷೆ ಮಾಡಿದವರೊಬ್ಬರು ಕನ್ನಡದಲ್ಲಿ ಮಕ್ಕಳಿಗಾಗಿ ಕೆಲವು ಕತೆಗಳನ್ನು ಬರೆದ ರಂತೆ. ಆಗ ಊರೆಲ್ಲಾ ಇವರನ್ನು ಎಂ. ಎ., ಪರೀಕ್ಷೆಮಾಡಿ ಕನ್ನಡದಲ್ಲಿ ಕತೆ ಬರೆಯುವುದಕ್ಕೆ ಇವನಿಗೇನು ಬಂತು ತೆವಲು ಎಂದರಂತೆ. ಊರೆಲ್ಲಾ ಎಂದರೆ ಹೀಗೆ ಹೇಳಿದವರೆಲ್ಲಾ, ನಾನು ಸಣ್ಣ ಕತೆಗಳನ್ನು ಬರೆಯಲಾರಂಭಿಸಿ ದಾಗಲೂ ಇಂಥ ಮಾತುಗಳನ್ನು ಹೇಳುತ್ತಿದ್ದರು. ಈಗ ಬರೆಯುತ್ತಿರುವವರ ಸಣ್ಣ ಕತೆಗಳ ವಿಷಯದಲ್ಲಿಯೂ ಅಲ್ಲಲ್ಲಿ ಈರೀತಿಯ ಮಾತು ಬರುತ್ತದೆ; ಆದರೆ ಆಗಣಷ್ಟು ಸಾಮಾನ್ಯವಾಗಿ ಬರುವುದಿಲ್ಲ. ಇಂಥ ವಿಮರ್ಶೆಯನ್ನು ಕುರಿತು ನಾವು ಬಹಳ ಚಿಂತಿಸಬೇಕಾದ ಕಾರಣವಿಲ್ಲ. ಬಹಳ ಬೆಳೆದಿರುವು ದೆಂಬ ಇಂಗ್ಲಿಷ್ ಸಾಹಿತ್ಯದಲ್ಲಿ ಕೂಡ ಒಬ್ಬೊಬ್ಬ ವಿಮರ್ಶಕನು ಸಣ್ಣಕತೆಯ ವಿಷಯದಲ್ಲಿ ಇಂಥ ಮಾತನ್ನು ಒಮ್ಮೊಮ್ಮೆ ಹೇಳುತ್ತಾನೆ. ಉದ್ದ ಕಡಿಮೆ ಆದದ್ದರಿಂದ ಇದರ ಯೋಗ್ಯತೆ ಕಡಿಮೆ ಎಂಬ ಭಾವನೆ ಈ ಜುಗುಪ್ಸೆಯ ಕಾರಣವೆಂದು ಕಾಣುತ್ತದೆ. ನ್ಯಾಯವಾಗಿ ನೋಡಿದರೆ ಸಣ್ಣಕತೆ ಎನ್ನುವುದು ಸಾಹಿತ್ಯದಲ್ಲಿ ಒಂದು ರೂಪ. ಇತರ ರೂಪಗಳಲ್ಲಿ ಒಳ್ಳೆಯ ಕೃತಿ ಬರುವು ದಕ್ಕೆ ಊಹೆ ಪ್ರತಿಭೆ ವಿಮರ್ಶೆ ಬೇಕಾಗುವಂತೆ ಇದರಲ್ಲಿಯೂ ಬೇಕಾಗುತ್ತವೆ.

ಸರಿಯಾದ ಸಣ್ಣ ಕತೆಯಲ್ಲಿ ಸಣ್ಣತನವಿರುವುದು ಹೆಸರಿನಲ್ಲಿ ಮತ್ತು ಆಕಾರದಲ್ಲಿ ಮಾತ್ರ. ಅದರ ಗುಣದಲ್ಲಿ ಶಕ್ತಿಯಲ್ಲಿ ಬೆಲೆಯಲ್ಲಿ ಈ ಕಾರ್ಶ್ಯವಿಲ್ಲ. ಈಗ ಹತ್ತೂ ಕಡೆ ಅಚ್ಚಾಗುತ್ತಿರುವ ಎಲ್ಲಾ ಕಥೆಯೂ ಚೆನ್ನಾಗಿಲ್ಲವಲ್ಲಾ ಎಂದು ಯಾರೂ ಅಸಹನೆ ತೋರಬಾರದು. ಯಾವುದು ಬೆಳೆಯಬೇಕಾದರೂ ಅದರ ಪೋಷಕರಲ್ಲಿ ಅಭಿಮಾನವಿರಬೇಕು, ಸಹನೆ ಇರಬೇಕು. ನಮ್ಮ ಹೊಸ ಸಾಹಿತ್ಯದ ಯಾವ ಭಾಗವೇ ಆಗಲಿ ಬೆಳೆಯಬೇಕೆಂದು ನಾವು ಇಚ್ಛೆ ಪಡುವುದಾದರೆ ನಾವು ಅದನ್ನು ತಾಳ್ಮೆಯಿಂದ ಅಭಿಮಾನದಿಂದ ನೋಡಬೇಕು. ಈ ಮನೋಧರ್ಮ ನಮ್ಮ ಜನರಲ್ಲಿ ವಾಡಿಕೆಯಾಗಬೇಕಾಗಿದೆ.

ಇದುವರೆಗೆ ನಮ್ಮಲ್ಲಿ ಬಂದಿರುವ ಸಣ್ಣಕತೆಗಳಲ್ಲಿ ಅನೇಕ ನಮ್ಮ ಗೌರವಕ್ಕೆ ಅರ್ಹವಾದವು ಇವೆ. ಅವುಗಳನ್ನು ಬರೆದವರ ಹೆಸರನ್ನು ನಾನಿಲ್ಲಿ ಹೇಳುವುದಿಲ್ಲ. ಈ ಕತೆಗಳಲ್ಲಿ ಬಡವರ ಬಾಳಿನೊಂದಿಗೆ ಸಹಾನುಭೂತಿ, ಹಳ್ಳಿಯ ಜನದಮೇಲೆ ಪ್ರೀತಿ, ಎಲ್ಲ ಜೀವನವನ್ನೂ ಕುರಿತು ಪ್ರೇಮ, ಕಷ್ಟವನ್ನು ಕುರಿತು ಕನಿಕರ, ಹಿಂದಣ ಹಿರಿಮೆಯನ್ನು ಕುರಿತ ಹೆಮ್ಮೆ, ಮುಂದಣ ದಾರಿಯನ್ನು ಕುರಿತ ವಿಚಾರ ಇವೆಲ್ಲಾ ಕಂಡಿವೆ. ಒಂದೊಂದರಲ್ಲಿ ಒಂದು ಹೃದಯದ ಭಾವನೆ ಬಹುಜನದ ಭಾವನೆಯಾಗಲು ಯತ್ನಮಾಡಿದೆ. ಈಗ ಎರಡು ಮೂರು ವರ್ಷದ ಈಚೆಗಂತೂ ಬೇರೆಬೇರೆ ತರಹದ ಕತೆಗಳು ಪ್ರಕಟವಾಗಿ ನಮ್ಮಲ್ಲಿ ಸಣ್ಣಕತೆಗಳ ವ್ಯಾಪ್ತಿ ವಿಸ್ತಾರವಾಗಿದೆ.

ಹೀಗೆ ನಮ್ಮ ಸಣ್ಣಕತೆಗಳ ವ್ಯಾಪ್ತಿಯನ್ನು ವಿಸ್ತಾರಪಡಿಸುವುದರಲ್ಲಿ ಶ್ರೀ. ಅ. ನ. ಕೃಷ್ಣರಾಯರು ಶ್ಲಾಘ್ಯವಾದ ಕೆಲಸವನ್ನು ಮಾಡಿದಾರೆ. ಈ ಮೊದಲೇ ಇವರ ಇತರ ಗ್ರಂಥಗಳಿಂದ ನಮ್ಮ ಜನರಿಗೆ ಇವರ ಪರಿಚಯ ಆಗಿದೆ. ಕೃಷ್ಣರಾಯರು ತಮ್ಮ ಸುತ್ತಣ ಬಾಳನ್ನು ಕೌತುಕದಿಂದ ನೋಡತಕ್ಕವರು; ಅದರ ಅಂಶಗಳನ್ನು ಕುತೂಹಲರಾಗಿ ಗ್ರಹಿಸಬಲ್ಲವರು; ಅದರಿಂದ ತಮ್ಮ ಮನಸ್ಸಿನಲ್ಲಿ ಹೊಮ್ಮುವ ಭಾವನೆಗೆ ಪ್ರತಿಭೆಯಿಂದ ಆಕಾರ ಕೊಡಬಲ್ಲವರು. ಇವರ ನಾಟಕಗಳಲ್ಲಿ ಬರುವ ಶಾಸ್ತ್ರಿ ಗಗ್ಗ ಹುಡುಗ ಸೋದರಮಾವ ಸ್ನೇಹಿತರು ತರುಣರು ಗುಮಾಸ್ತರು ಇವರೆಲ್ಲಾ ನಿಜವಾದ ವ್ಯಕ್ತಿಗಳು. ಜೀವನದ ವ್ಯಕ್ತಿಗಳನ್ನು ಬರಹದಲ್ಲಿ ಹೀಗೆ ತರುವುದು ಹಿರಿಯಶಕ್ತಿ. ಇದರೊಂದಿಗೆ ಇವರ ಲೇಖನದಲ್ಲಿ ನೊಂದವರೊಡನೆ ನೋಯುವ ಕನಿಕರ, ಬಾಳಿನ ಅಲ್ಪ

ತನವನ್ನು ಸಹಿಸದ ಒಂದು ಔದಾರ್ಯ, ಜೀವನದ ಕೇಡುಗಳನ್ನು ನೋಡು ವುದರಲ್ಲಿ ಒಂದು ಕೆಚ್ಚು, ಅರಿಯಿಂದ ಕೂಡಿದ ಮುನ್ನೋಟ, ಮುಂದರಿಯ ಬೇಕೆಂಬ ಉತ್ಸಾಹ ಇವು ಕಾಣುತ್ತವೆ. ಇವೆಲ್ಲ ನಮ್ಮ ಸಾಹಿತ್ಯದಲ್ಲಿ ಅವಶ್ಯ ವಾಗಿ ಪ್ರಕಾಶವಾಗಬೇಕಾದ ಗುಣಗಳು. ಈ ಪುಸ್ತಕದಲ್ಲಿ ಈ ಗುಣಗಳು ಹಲವು ವ್ಯಕ್ತವಾಗಿವೆ: ಒಂದು ಕತೆಯಲ್ಲಿ ಜಾತಿಮತಗಳ ಭೇದವರಿಯದ ಸಹಾನುಭೂತಿ; ಇನ್ನೊಂದರಲ್ಲಿ ಒಬ್ಬ ನಟನ, ಮತ್ತೊಂದರಲ್ಲಿ ಒಬ್ಬ ಗಾಯಕನ, ಹೃದಯದ ಅರಿವು; ಒಂದರಲ್ಲಿ ಕೊಳಚೆಯಲ್ಲಿ ಕಾಲಿಟ್ಟ ನೋದ ರನ ವಿಷಯದಲ್ಲಿ ಕರುಣೆ; ಪೂರ್ತ್ತದಲ್ಲಿ ವೈಶಾಲ್ಯವನ್ನರಸಿರುವ ಒಂದು ಚಿತ್ತ ವೃತ್ತಿ. ನಮ್ಮ ಸಾಹಿತ್ಯದ ಬೆಳವಣಿಗೆಯನ್ನು ಆಕಾಂಕ್ಷೆಯಿಂದ ನೋಡುತ್ತಿರು ವವರಿಗೆ ಇವರ ಲೇಖನಗಳಿಂದ ಒಂದು ರೀತಿಯಲ್ಲಿ ತೃಪ್ತಿಬರುತ್ತದೆ, ಒಂದು ರೀತಿಯಲ್ಲಿ ಆಸೆಮೊಳೆಯುತ್ತದೆ.

ಇನ್ನೂ ಈಗ ತಲೆಯೆತ್ತುತ್ತಿರುವ ನಮ್ಮ ಸಾಹಿತ್ಯವು ಮುಂದೆ ನಮ್ಮ ತರುಣರ ಉದ್ಯಮದಿಂದ ಬೆಳೆಯಬೇಕಾಗಿದೆ. ನಾವು ಕೈಕೊಂಡಿರುವ ಕೆಲಸ ದೊಡ್ಡ ಕೆಲಸ; ಬಹಳ ಶ್ರಮದಿಂದ, ಬಹು ಉತ್ಸಾಹದಿಂದ, ವಿಶೇಷ ಉತ್ತೇ ಜನದಿಂದ ಮಾತ್ರ ಸಾಧಿಸಬಹುದಾದದ್ದು. ಇದಕ್ಕೆ ಟೊಂಕಕಟ್ಟಿ ನಿಂತಿರುವ ತರುಣರಿಗೆ ಎಲ್ಲ ವಿಧದಲ್ಲಿಯೂ ಪ್ರೋತ್ಸಾಹ ಬೇಕಾಗಿದೆ. ಅದನ್ನು ಕೊಡು ವುದು ನಮ್ಮ ಜನರೆಲ್ಲರ ಕೆಲಸ. ಅದರಲ್ಲಿಯೂ ಸ್ವಲ್ಪ ವಯಸ್ಸಾಗಿ ಸಾಹಿತ್ಯದ ವಿಷಯ ಜನತೆಯ ವಿಷಯವನ್ನು ಸ್ವಲ್ಪವಾದರೂ ಯೋಚನೆ ಮಾಡಿರುವ ಪ್ರತಿಯೊಬ್ಬರ ಕರ್ತವ್ಯ. ಉತ್ಸಾಹದಿಂದ ಶ್ರದ್ಧೆಯಿಂದ ಆಸೆಯಿಂದ ಭಾಷಾ ಸೇವೆಯಲ್ಲಿ ಕೈಹಾಕಿರುವ ಶ್ರೀಮಾನ್ ಅ. ನ. ಕೃಷ್ಣರಾಯರ ವಿಷಯದಲ್ಲಿ ನನ್ನ ಹಾರಯಿಕೆಯಿದು. ನಮ್ಮ ಭಾಷಾಮಾತೆಯ, ನಮ್ಮ ಜನತೆಯ, ಅದರಲ್ಲಿಯೂ ನಮ್ಮ ಹಿರಿಯರ ಅನುಗ್ರಹ ಇವರಿಗೆ ತುಂಬಾ ಒದಗಲಿ. ಇವರ ಶಕ್ತಿ ಸಾಮರ್ಥ್ಯಗಳು ಅಭಿವೃದ್ಧಿಯಾಗಲಿ. ಇವರಿಗೆ ಬೇಕಾದ ಸೌಕರ್ಯಗಳು ನೆರೆದುಬರಲಿ. ಇವರ ಭಾಷಾಸೇವೆ ಸಾಂಗವಾಗಿ ನಡೆಯಲಿ.

ಬೆಂಗಳೂರು. ಆಂಗೀರಸ ಸಂ ||<br>ಕಾರ್ತೀಕ ಶುದ್ಧ ತ್ರಯೋದಶಿ

**ಶ್ರೀನಿವಾಸ.**

# ಬಿನ್ನಹ

---

ವಿದೇಶೀಯ ಸಾಹಿತ್ಯಗಳಲ್ಲಿ ಸಣ್ಣ ಕತೆಯು ಯಾವ ಸ್ಥಾನವನ್ನು ಪಡೆದಿದೆಯೋ ಅದೇ ಸ್ಥಾನವು ನಮ್ಮ ಸಾಹಿತ್ಯದಲ್ಲಿಯೂ ಇತ್ತೀಚೆಗೆ ಏರ್ಪಡುತ್ತ ಬಂದಿದೆ. ಕನ್ನಡದ ಕೆಲವು ಚಂಪೂಕಾವ್ಯಗಳಲ್ಲಿ ಬರುವ ಕಥಾಭಾಗಗಳು ಸಣ್ಣ ಕತೆಗಳ ಲೆಕ್ಕಕ್ಕೆ ಸೇರಬಹುದಾದರೂ ಸಣ್ಣ ಕತೆಯನ್ನೇ ಸಾಹಿತ್ಯದ ಒಂದು ಪ್ರಧಾನಾಂಶವಾಗಿ ಭಾವಿಸಿ ಅದರ ಬೆಳವಣಿಗೆಗೆ ಮನಸ್ಸು ಕೊಟ್ಟವರು ವಿದೇಶೀಯ ಸಾಹಿತ್ಯಗಳ ಪರಿಚಯವುಳ್ಳ ಇಂದಿನ ಕೆಲವು ಹಿರಿಯ ಸಾಹಿತಿಗಳೆಂದರೆ ತಪ್ಪಾಗಲಾರದು. ಕಾಲಾನುಗುಣವಾಗಿ ಸಾಹಿತ್ಯವೂ ಮಾರ್ಪಡುತ್ತದೆ. ಘಂಟೆ ಘಂಟೆಗಳು ಕುಳಿತು ನಿಘಂಟುಗಳ ಸಹಾಯದಿಂದ ಪಂಪ, ರನ್ನ, ಷಡಕ್ಷರಿಗಳನ್ನು ಜೀರ್ಣಿಸಿಕೊಳ್ಳುವ ತಾಳ್ಮೆಯು ನಮ್ಮವರಲ್ಲಿ ಕಡಿಮೆಯಾಗುತ್ತಿದೆ. ಜ್ಞಾನ ಸಾಹಿತ್ಯದಲ್ಲಿ ನ್ಯಾಸಗಳಿಗೂ, ರೂಪಕ ಸಾಹಿತ್ಯದಲ್ಲಿ ಏಕಾಂಕನಾಟಕಗಳಿಗೂ ಕಾವ್ಯಸಾಹಿತ್ಯದಲ್ಲಿ ಗೀತೆಗಳಿಗೂ ಲಘುಗದ್ಯ ಸಾಹಿತ್ಯದಲ್ಲಿ ಸಣ್ಣ ಕತೆಗಳಿಗೂ ಈಗ ವಿಶೇಷ ಪ್ರೋತ್ಸಾಹ ದೊರೆಯುತ್ತಿದೆ. ಜನತೆಯು ಹೆಚ್ಚು ಕಾಲಹರಣವಾಗದಂತೆ ಒಂದೇ ಸಲಕ್ಕೆ ಓದಿ ಮುಗಿಸುವಂತಹ ಸಾಹಿತ್ಯವನ್ನು ಕೋರುತ್ತಿದೆ; ಆ ಕೋರಿಕೆಯನ್ನು ಸಣ್ಣ ಕತೆಗಳು, ಏಕಾಂಕ ನಾಟಕಗಳು, ನ್ಯಾಸಗಳು, ಗೀತೆಗಳು ಸಲ್ಲಿಸುತ್ತಿವೆ.

ಒಂದು ಕಾಲದ ಆವಶ್ಯಕತೆಯನ್ನು ಪೂರ್ಣಮಾಡಿದ ಪ್ರಾಶಸ್ತ್ಯವನ್ನಲ್ಲದೆ ಎಲ್ಲ ಕಾಲಗಳ ಗೌರವವನ್ನು ಸಂಪಾದಿಸುವ ಯೋಗ್ಯತೆಯೂ ಸಣ್ಣ ಕತೆಗಿದೆ. ಸಣ್ಣ ಕತೆಯು ಕಾದಂಬರಿಯ ಒಂದು ಅಧ್ಯಾಯವಲ್ಲ ಅಥವಾ ಕಾದಂಬರಿಯ ಸಾರಾಂಶವೂ ಅಲ್ಲ. ಯಾವ ಕಥಾವಸ್ತುವು ಕಾದಂಬರಿಗೆ ಅತ್ಯುತ್ತಮವಾಗುತ್ತದೆಯೋ ಅದೇ ಸಣ್ಣ ಕತೆಗೆ ಕೇವಲ ನಿಷ್ಪ್ರಯೋಜಕವಾದುದಾಗುತ್ತದೆ. ಕಾದಂಬರಿಯ ಪ್ರಪಂಚವು ವಿಸ್ತಾರ ಪ್ರಪಂಚ. ಒಬ್ಬ ವ್ಯಕ್ತಿಯನ್ನೋ, ಒಂದು ಸಂಸಾರವನ್ನೋ, ಹಲವು ಘಟನೆಗಳನ್ನೋ ಮುಂದೆ ಮಾಡಿಕೊಂಡು ಕಾದಂಬರಿಕಾರನು ಪೂರ್ಣ ಸ್ವಾತಂತ್ರ್ಯದಿಂದ ವ್ಯಕ್ತಿಯ,

ಘಟನೆಗಳ ಪೂರ್ವೇತಿಹಾಸದಿಂದ ಮುಕ್ತಾಯದವರೆಗೆ ತನ್ನ ಭಾವನಾಶಕ್ತಿಗೆ ತೋರಿದಷ್ಟು ವಿಷಯಗಳನ್ನು ಹೆಣೆಯಬಹುದು. ಅನೇಕ ಘಟನೆಗಳನ್ನು ಒಮ್ಮೆಲೇ ನಿಯೋಜಿಸಿ ಎಷ್ಟೋ ವೇಳೆಯಾದನಂತರ ಅವುಗಳ ಕೊನೆಗಾಣು ವಿಕೆಯನ್ನು ತೋರಬಹುದು ಆದರೆ ಈಯಿಲ್ಲ ಸ್ವೇಚ್ಛಾ ಪ್ರವರ್ತನೆಯು ಸಣ್ಣ ಕತೆಗಳಲ್ಲಿ ಸಾಧ್ಯವಿಲ್ಲ. ಸಣ್ಣ ಕತೆಗಾರನು ಒಂದು ಜೀವನದ ಅಥವಾ ವ್ಯಕ್ತಿಯ ವಿಶಿಷ್ಟ ಬೆಳವಣಿಗೆಯನ್ನು ಹೇಳುವುದಿಲ್ಲ; ಜೀವನದ ಅಥವಾ ವ್ಯಕ್ತಿಯಲ್ಲಿ ತನಗೊಪ್ಪಿಕೆಯಾದ ಯಾವುದೋ ಒಂದು ಅಂಶವನ್ನು ಅದರ ತುಂಬುಸ್ವರೂಪದಲ್ಲಿ ತೋರುತ್ತಾನೆ. ಇದು ಸಣ್ಣ ಕತೆಗಳ ಸಾಮಾನ್ಯ ನಿಯಮ. ಇದನ್ನು ಉಲ್ಲಂಘಿಸುವವರು ಕೂಡ ಜೀವನದ ಮೊದಲಿನಿಂದ ಕೊನೆಯವರೆಗೂ ಯಾವದಾದರೂ ಒಂದೇ ಒಂದು ಭಾವವನ್ನು ಮುಂದು ಮಾಡಿಕೊಂಡು ತಮ್ಮ ಕೃತಿಗಳನ್ನು ವಿರಚಿಸುತ್ತಾರೆ. ಸಣ್ಣ ಕತೆಯೆಂದು ಒಂದು ಕೃತಿಯನ್ನು ನಿಕ್ಕೊಳ್ಳಬೇಕಾದರೆ ಅದು ಒಂದು ಕಥಾಂಶದ, ಭಾವನೆಯ ಜೀವನಚಿತ್ರದ, ಮನೋಗುಣದ, ಘಟನೆಯ ನಿರೂಪಣವಾಗಿರಬೇಕೆಂಬ ಕಟ್ಟೆಂಟು. ಇದರಿಂದ ಕಾದಂಬರಿಕಾರನಂತೆ ಕತೆಗಾರನು ತಾನು ಹೇಳ ಬೇಕೆಂದುಕೊಂಡಿರುವುದೆಲ್ಲವನ್ನೂ ಹೇಳಲಾಗದಿದ್ದರೂ ಅವನಿಗಿಂತಲೂ ಹೆಚ್ಚಿನ ರಮ್ಯತೆ, ತೀಕ್ಷ್ಣತೆಗಳಿಂದ ತನ್ನ ಮನಸ್ಸಿನ ಭಾವನೆಗಳನ್ನು ಹೊರ ಮಾಡುತ್ತಾನೆ. ರೇಖಾವಿನ್ಯಾಸದ ಸೌಂದರ್ಯವನ್ನು ಕಂಡುಕೊಂಡಿರುವ ಕುಶಲ ಶಿಲ್ಪಿಯು ಬಣ್ಣಗಳ, ದೂರದೃಶ್ಯದ ಸೌಕರ್ಯಗಳನ್ನು ಪಯೋಗಿಸಿ ಕೊಳ್ಳದೆ ಕೇವಲ ರೇಖೆಗಳಿಗೇ ಬದ್ಧನಾಗಿ ಚಿತ್ರದಲ್ಲಿ ಯಾವ ಬಗೆಯ ಬಿಡಿ ಬಿಡಿಯಾದ ಶಕ್ತಿಮಯವಾದ ಓಜಸ್ಸನ್ನು ತೋರಬಲ್ಲನೋ ಹಾಗೆಯೇ ಕತೆಗಾರನೂ ತನ್ನ ಸಂಕ್ಷಿಪ್ತ ಸಾಧನದಿಂದ ಇಡಿಯಾದ ಜೀವನವನ್ನು ತೋರದಿದ್ದರೂ ತನ್ನ ಕೆಲಸವು ಅಚ್ಚಳಿಯದ ಭಾವನೆಯನ್ನು ಮೂಡುವಂತೆ ಮಾಡಬಲ್ಲನು.

ಸಮಾಜದ ಸುಖದುಃಖಗಳನ್ನು ತಪ್ಪು ಒಪ್ಪುಗಳನ್ನು ತೋರುವು ದಕ್ಕೆ ಸಣ್ಣ ಕತೆಯು ಅತ್ಯುತ್ತಮ ಶಕ್ತ್ಯಾಯುಧ. ಉಚ್ಚಸಾಹಿತ್ಯದ ಉದ್ದೇ ಶವನ್ನು ಸಣ್ಣ ಕತೆಗಳು ತಮ್ಮ ಸರ್ವ ಜನಾದರಣೀಯತೆಯಿಂದ ಚೆನ್ನಾಗಿ ಸಾಧಿಸುತ್ತವೆ.

ಈ "ಕಿಡಿ" ಗ್ರಂಥದಲ್ಲಿ ಕೆಲವು ಕತೆಗಳೇ ಇವೆ; ಮತ್ತೆ ಕೆಲವು ನಾನು ಹೇಳಬೇಕೆಂದಿರುವ **ವಿಷಯಗಳ ಕತೆ**ಗಳಿವೆ. ಜೀವನದ ಹೊರಹೊದಿಕೆಯನ್ನು ರಂಗು ರಂಗಾಗಿ ಚಿತ್ರಿಸುವುದಕ್ಕಿಂತಲೂ, ಅಂತರಂಗದ ವಿಪ್ಲವವನ್ನು ಹೊರಗಾಣಿಸುವುದೇ ನಾನು ಕತೆಗಳ ಬರವಣಿಗೆಯಲ್ಲಿ ಅನುಸರಿಸುವ ನೀತಿ. ಅಂತರಂಗವನ್ನು ಅರಿತ ಹೊರತೂ ಹೊರ ರಂಗವು ಅರ್ಥವಾಗುವುದಿಲ್ಲ; ಅಂತರಂಗವು ಶುದ್ಧಿಗೊಂಡ ಹೊರತೂ ಬಹಿರಂಗವು ಪವಿತ್ರವಾಗುವುದಿಲ್ಲ. ಇದು ಅನೇಕರಿಗೆ ರುಚಿಸದಿರಬಹುದು. ಆದರೆ ಕ್ರಿಯಾಶಾಲಿಯಾಗಬೇಕೆಂದು ಹಾರೈಸುವ ಬರೆಹಗಾರನು ಯಾರನ್ನು ಮೆಚ್ಚಿಸಲೂ ಲೇಖಣಿಯನ್ನು ಹಿಡಿಯುವುದಿಲ್ಲವೆಂಬುದನ್ನು ಓದುಗರು ಮರೆಯದಿರಬೇಕು.

ಈ ಕತೆಗಳನ್ನು ಓದುವವರಿಗೆ ಕಥಾವಸ್ತುವನ್ನೂ ಸಂಘಟನೆಗಳನ್ನೂ ಬರೆದವನ ಜೀವನಕ್ಕೆ ಹಚ್ಚುವ ಚಪಲ ಹುಟ್ಟಬಹುದು. ಮತ್ತೆ ಕೆಲಬರಿಗೆ ಇದರಲ್ಲಿ ಬರುವ ವ್ಯಕ್ತಿಗಳು ತಮಗೆ ಪರಿಚಿತರಾದ ವ್ಯಕ್ತಿಗಳಿಗೆ ಸಮನ್ವಯವಾಗಬಹುದು. ನಾನು ನನ್ನನ್ನಾಗಲೀ, ಯಾರನ್ನಾಗಲೀ ಉದ್ದೇಶಿಸಿ ಇವುಗಳನ್ನು ರಚಿಸಿಲ್ಲ-ಈ ಕತೆಗಳಲ್ಲಿ ಬರುವ ಯಾವ ವಿಷಯವೂ ನನ್ನ ಜೀವನದಲ್ಲಿ ಸಂಭವಿಸಿಲ್ಲ. ಮಾಡುವ ಕೆಲಸದಲ್ಲಿ ವಿಶೇಷವಾಗಿ ಮನಸ್ಸನಿರಿಸುವಾಗ ಬರೆಹಗಾರನು ತಾನೇ ಪಾತ್ರಗಳು-ಪಾತ್ರಗಳು ತಾನೇ ಎಂಬ ಭ್ರಮೆಗೆ ಒಳಗಾಗಿಯೇ ಇರುತ್ತಾನೆ. ಆದರೆ ಓದುಗರು ಆ ಭ್ರಮೆಯ ಗಡಿಯನ್ನು ಕಾವ್ಯರಂಗಕ್ಕೆ ಮಾತ್ರವೇ ಮುಟ್ಟಿಸದೆ ಜೀವನರಂಗಕ್ಕೂ ಎಳೆಯುತ್ತಾರೆ. ಇಂತಹ ದೃಷ್ಟಿಭೇದವನ್ನು ಕಲ್ಪನೆಮಾಡಿಕೊಳ್ಳಬಾರದಾಗಿ ಓದುಗರಲ್ಲಿ ನನ್ನ ಸವಿನಯ ಪ್ರಾರ್ಥನೆ.

ನನ್ನ ಗ್ರಂಥಕ್ಕೆ ಕನ್ನಡ ಕಿರಿಯ ಸಾಹಿತಿಗಳ ಹಿರಿಯಣ್ಣಂದಿರಾದ 'ಶ್ರೀನಿವಾಸ'ರ ಶುಭಾಕಾಂಕ್ಷೆಯ ಹಿತವಚನವು ದೊರೆತುದು ನನ್ನ ಪುಣ್ಯವಿಶೇಷವೆಂದೇ ಭಾವಿಸುತ್ತೇನೆ. ನನ್ನ ವಿಚಾರದಲ್ಲಿಯೂ, ನನ್ನ ಅಲ್ಪಕೃತಿಗಳ ವಿಚಾರದಲ್ಲಿಯೂ ಅವರು ತೋರುತ್ತಿರುವ ಅಂತಃಕರಣವು ನನ್ನನ್ನು ಅರಿಮೂಕನನ್ನಾಗಿಸಿದೆ. ಅಂತಹ ನಿರ್ಮಲಾಂತಃಕರಣದ ಕಣಸುಗಾರರು ನಮ್ಮ ಸಾಹಿತ್ಯದ, ನಮ್ಮ ಜನತೆಯ, ನಮ್ಮ ಸಂಸ್ಕೃತಿಯ ಸೇವೆಮಾಡುತ್ತಿರುವುದು ನಮ್ಮೆಲ್ಲರಿಗೂ ದೊಡ್ಡ ಹೆಮ್ಮೆಯ ವಿಷಯವೇ ಆಗಿದೆ.

ನನ್ನ ಇತರ ಗ್ರಂಥಗಳ ಪ್ರಕಾಶನಕ್ಕೆ ಕಾರಣಕರ್ತರಾದ ವಿ. ಬಿ. ಪಿ. ಏಜನ್ಸಿಯ ಮಾಲಿಕರಾದ ಶ್ರೀಮಾನ್ ಕೆ. ಜಿ. ಶ್ರೀನಿವಾಸರಾಯರೇ ಇದರ ಹೊರೆಯನ್ನೂ ಹೊತ್ತಿದ್ದಾರೆ. ನನ್ನ ಸಾಹಿತ್ಯಕ್ಕೂ, ನನ್ನ ಜನಕ್ಕೂ ನಾನು ಏನಾದರೂ ಸೇವೆಮಾಡಲು ಈವರೆಗೆ ಸಾಧ್ಯವಾಗಿದ್ದರೆ ಅದು ಈ ಗೆಳೆಯರ ಸೌಹಾರ್ದದ ಸಹಾಯದಿಂದಲ್ಲದೆ ನನ್ನೊಬ್ಬನ ಶಕ್ತಿಸಾಹಸಗಳಿಂದಲ್ಲವೆಂದು ಹೇಳಲಾತುರನಾಗಿದ್ದೇನೆ. ನಾವು ಗ್ರಂಥಗಳ ರಚನೆಯಿಂದ ಗಳಿಸುವ ಕೀರ್ತಿಯು ಯಾರು ಯಾರಿಗೆ ಎಷ್ಟೆಷ್ಟು ಸೇರತಕ್ಕದ್ದೆಂದು ಯೋಚಿಸಿದರೆ ನಮ್ಮ ಪಾಲು ಬಹಳ ಸಣ್ಣದಾಗುತ್ತದೆ.

ಪ್ರತಿಯೊಂದು ಗ್ರಂಥವನ್ನು ಮುಗಿಸಿ ಪ್ರಕಟಿಸುವಾಗಲೂ ನನ್ನ ಮನಸ್ಸಿನಲ್ಲಿ ಒಂದು ಸಂತೋಷ ಒಂದು ದುಃಖ ಎರಡೂ ಕೂಡಿರುತ್ತವೆ. ಈ ಮೂಲಕ ನನ್ನ ಜನತೆಯ ಹೃದಯಕ್ಕೆ ತುಸವಾದರೂ ಸಮೀಪವಾದೆನಲ್ಲಾ ಎಂಬುದೇ ಹಿಗ್ಗು; ಆದರೆ ಇದಕ್ಕಿಂತಲೂ ಉತ್ತಮ ಗ್ರಂಥವನ್ನು ಅರ್ಪಿಸಲಿಲ್ಲವಲ್ಲಾ ಎಂಬುದೇ ತಗ್ಗು. ನಾನಾಗಲೀ ನನ್ನಂತೆಯೇ ನಾಡನುಡಿಯ ಸೇವೆಮಾಡುತ್ತಿರುವ ನನ್ನ ಸಾಹಿತ್ಯಬಂಧುಗಳೇ ಆಗಲಿ ಯಾರೂ ನಾವು ಮಾಡುತ್ತಿರುವ ಕೆಲಸಗಳು, ಬರೆಯುತ್ತಿರುವ ಗ್ರಂಥಗಳು ವಿಮರ್ಶಾತೀತವೆಂದೂ, ಸರ್ವಾಂಗ ಸುಂದರವಾದುವೆಂದೂ ಭಾವಿಸುತ್ತಿಲ್ಲ. ನಮ್ಮ ಸೇವೆಯನ್ನು ಅಭಿಮಾನದಿಂದ ದೇಶೀಯರು ಸ್ವೀಕರಿಸಿ ನಮ್ಮಿಂದ ಹೆಚ್ಚು ಹೆಚ್ಚು ಸೇವೆಯನ್ನು ಕೈಗೊಂಡು ನಮ್ಮ ಜನ್ಮಗಳನ್ನು ಸಾರ್ಥಕಗೊಳಿಸಬೇಕೆಂಬುದೇ ನಮ್ಮ ಹೃತ್ಪೂರ್ವಕವಾದ ಪ್ರಾರ್ಥನೆ.

೪—೧೧—೧೯೩೨
ಅನ್ನಪೂರ್ಣ : ವಿಶ್ವೇಶ್ವರಪುರಂ
ಬೆಂಗಳೂರು ನಗರ.

---

# ಪರಿವಿಡಿ



---

## ಚಿತ್ರ

ಪೂಜ್ಯರಾದ

ನನ್ನ ತಂದೆಯವರ ಚರಣಸನ್ನಿಧಿಯಲ್ಲಿ ಪ್ರೇಮಪುರಸ್ಸರವಾಗಿ

ಈ ಪುಟ್ಟಗ್ರಂಥವನ್ನು ಅರ್ಪಿಸಿದ್ದೇನೆ.

I Love all beauteous things
I seek and adore them.
God hath no better praise
And man in his hasty days,
Is honoured for them.
I too will something make
And joy in the making
Although to-morrow it seem
Like the empty words of a dream
Remembered on waking.

—*Robert Bridges.*

# ಕರುಳಿನ ಕೂಗು

———o———

೧

'ಉಸ್ಮಾನ್........ಉಸ್ಮಾನ್'

ಮಲಗಿದ್ದ ಮಗನಿಂದ ಉತ್ತರವು ಬರಲಿಲ್ಲ.

'ಉಸ್ಮಾನ್........ಮೇರಾಬೇಟಾ........'

'ದಾದಾ........'

'ಉಠೋಜೀ........'

ಮಗನೆದ್ದು ತಂದೆಯ ಮುಖವನ್ನು ನೋಡಿದನು. ವಿಶಾಲವಾದ ದುಂಡು ಮುಖದಲ್ಲಿ ಮಿನುಗುತ್ತಿದ್ದ ದೊಡ್ಡ ಕಣ್ಣುಗಳಲ್ಲಿನ ಅಶ್ರುಮಿಶ್ರ ನೋಟವನ್ನು ನೋಡಿದನು. ತಂದೆಯೂ ಮಗನನ್ನು ನೋಡಿದನು. ನಿದ್ದೆಯ ನೆಪದಲ್ಲಿ ಮುಸುಕಿಟ್ಟು ರಾತ್ರಿಯೆಲ್ಲಾ ಅತ್ತು ಅತ್ತು ಕೆಂಪೇರಿದ್ದ ಮಗನ ಕಣ್ಣುಗಳಲ್ಲಿನ ಗುಪ್ತ ಶೋಕವನ್ನು ಗ್ರಹಿಸಿದನು. ಹುಟ್ಟಿದ ಆರು ತಿಂಗಳಲ್ಲಿಯೇ ತಾಯಿಯನ್ನು ಕಳೆದುಕೊಂಡ ಮಗನನ್ನು ಅತ್ಯಾದರದಿಂದ ಪೋಷಿಸಿ ಮುಂದಕ್ಕೆ ತಂದಿದ್ದನು. ಮಗನ ಬೆಳವಣಿಗೆಯನ್ನು ನೋಡುವ ಆನಂದದ ಭರದಲ್ಲಿ ಕರುಳನ್ನು ಕತ್ತರಿಸುತ್ತಿದ್ದ ಬಡತನದ ದಾರುಣವೇದನೆಯನ್ನು ಮರೆತಿದ್ದನು. ತನ್ನ ಮುಂದೆ ನಿಂತಿದ್ದವನು ತನ್ನ ಮಗ........ ತಾನು ೨೦ ಸಂವತ್ಸರಗಳು ಸಾಕಿ, ಸಲಹಿ, ಪೋಷಿಸಿದ ಮಗ. ತನ್ನ ಜೀವನಕ್ಕೆ ಬೆಳಕಿನ ಭಾಗ್ಯವನ್ನು ನೀಡಿದ ಮಗ!! ನೆನೆಯುತ್ತ ನೆನೆಯುತ್ತ ಮಹಮ್ಮದನ ನೀಳವಾದ ಬಿಳಿಯ ಗಡ್ಡವು ದುಃಖಾಶ್ರುವಿನಿಂದ ತೊಯ್ದು ಹೋಯಿತು.

ಎಷ್ಟೋಬಾರಿ ಈ ಹಾಳು ಜೀವನದಿಂದ ಮಗನನ್ನು ಬಿಡುಗಡೆ ಮಾಡಿ ಅವನನ್ನು ನಾಲ್ವರ ಸರಿಸಮಕ್ಕೆ ತರಬೇಕೆಂದು ಅಂದುಕೊಂಡಿದ್ದನು.

ಹೊತ್ತು ಹುಟ್ಟುವ ಸಮಯಕ್ಕೆದ್ದು, ತುಂಬದ ಹೊಟ್ಟೆಯನ್ನು ತುಂಬುವುದಕ್ಕಾಗಿ, ಹೆಗಲಮೇಲೆ ಸಾರಂಗಿಯನ್ನು ಹೊತ್ತು, ಮಾರ್ಕೆಟ್ಟಿನ ಬಳಿಗೋ ಮತ್ತೆ ಯಾವದಾದರೂ ಜನಸಂದಣಿಯು ಸೇರುವ ಸ್ಥಳದಲ್ಲಿಯೋ ಚೌಕ ಹಾಸಿ ಕುಳಿತು ಕಬೀರನ, ಮೀರಾಳ, ಪುರಂದರದಾಸರ ಕೀರ್ತನೆಗಳನ್ನು ಗಂಟಲುಕಿತ್ತು ಬರುವತನಕ ಹಾಡಿ ಹಾಡಿ, ಅಪರಾಹ್ಣದ ವೇಳೆಗೆ ಸಂಗ್ರಹವಾಗಿದ್ದ ಚಿಲ್ಲರೆ ಕಾಸುಗಳನ್ನು ಸಂಗ್ರಹಿಸಿಕೊಂಡು, ಅದರಿಂದ ಅಂದಿನ ಹೊಟ್ಟೆಯನ್ನು ತುಂಬುತ್ತಿದ್ದ ಜೀವನವು ಮಹಮ್ಮದನಿಗೆ ಸಾಕಾಗಿಹೋಗಿತ್ತು. 'ಸಂಜೆಯ ಗತಿಯೇನು ?-ನಾಳಿನ ಗತಿಯೇನು ?-ಕಾಹಿಲೆಬಿದ್ದರೆ ಏನುಗತಿ?' ಎಂಬ ಚಿಂತೆಯಿಲ್ಲದಂತೆ ಎರಡುಹೊತ್ತೂ ಹೊಟ್ಟೆತುಂಬುವಂತಹ ಕಸುಬಿಗೆ ಮಗನನ್ನು ಹಾಕಬೇಕೆಂಬ ಹಂಬಲಿಕೆಯಿತ್ತು. ಅದು ಕೆಲದಿವಸಗಳ ಹಿಂದೆ ನೆರವೇರಿತ್ತು. ಉಸ್ಮಾನನ ಸುಂದರ ರೂಪು, ಮೃದುಮಧುರವಾದ ಕಂಠ, ನಡೆನುಡಿಯ ಬೆಡಗುಗಳು ಪ್ರವಾಸಿಗಳಾಗಿ ಬಂದಿದ್ದ 'ಕಲ್ಕತ್ತೆಯ ಪಾರ್ಸಿ ನಾಟಕಮಂಡಳಿ'ಯ ಮಾಲೀಕರ ಗಮನವನ್ನತ್ತ ಸೆಳೆದವು. ಮಾತುಕತೆಗಳಾಗಿ ತಿಂಗಳಿಗೆ ೫೦ ರೂಪಾಯಿಯ ಸಂಬಳದಮೇಲೆ ಉಸ್ಮಾನನು ಕಂಪನಿಯನ್ನು ಸೇರುವುದು ಗೊತ್ತಾಗಿಹೋಯಿತು. ತನ್ನ ಸಮಸ್ತ ಅಭ್ಯುದಯಕ್ಕೂ ಕಾರಣನಾದ ತಂದೆಯನ್ನು ಬಿಟ್ಟು ಹೋಗಬೇಕು. ಆದರೆ ಉಸ್ಮಾನನಿಗೆ ಒಂದು ತೃಪ್ತಿ. ತಾನು ಸಂಪಾದಿಸಿದ ಹಣವನ್ನು ತಂದೆಗೆ ಕಳುಹಿಸಿಕೊಟ್ಟು ಅವನು ನಾಲ್ಕುದಿವಸವಾದರೂ ಸುಖವಾಗಿರುವಂತೆ ಮಾಡಲಾಗುವುದಲ್ಲಾ ಎಂಬುದು. ಮಗನನ್ನು ಬಿಟ್ಟಿರಲಾಗದ ವಿರಹವೇದನೆಯು ಮಹಮ್ಮದನನ್ನು ಎರಡುಮೂರು ದಿವಸದಲ್ಲಿಯೇ ಅರೆಜೀವ ಮಾಡಿಬಿಟ್ಟಿತ್ತು. ಆದರೆ ಮೇಘರಾಶಿಯಮೇಲೆ ಒಮ್ಮೊಮ್ಮೆ ಸುಳಿಯುವ ಮಿಂಚಿನ ಜಿಹ್ವೆಯ ಬಳ್ಳಿಯಂತೆ 'ಅವನ ಮುಂದಿನ ಸುಖವನ್ನು ನಾನು ಮುರಿಯಲೇ. ಮುಂದೆ ನನ್ನ ಉಸ್ಮಾನನು ದೊಡ್ಡ ಗವಯ್ ಆಗಬಹುದು.' ಎಂದು ಮನಸ್ಸಿಗೆ ಸಮಾಧಾನವು ಹೊಳೆಯುವುದು.

ರೈಲು ಹೊರಡುವ ಸಮಯ. ತಂದೆ ಮಕ್ಕಳು ಅಪ್ಪಿ ಕಣ್ಣೀರಿನ ಅಭಿಷೇಕ ಮಾಡುತ್ತಲಿದ್ದಾರೆ. ವೃದ್ಧನಾದ ಋಷಿರೂಪನಾದ ತಂದೆ. ತರುಣನಾದ ಸುಂದರನಾದ ಮಗ. ಇಬ್ಬರೂ ದುಃಖದ ನೆರೆಯಲ್ಲಿ ತಮ್ಮ

ತಮ್ಮನ್ನು ಮರೆತುಬಿಟ್ಟಿದ್ದಾರೆ. ಮಗನ ಮನಸ್ಸಿನ ತುಂಬ ತಂದೆಯ ಚಿಂತೆ; ತಂದೆಯ ಮನಸ್ಸಿನ ತುಂಬ ಮಗನ ಚಿಂತೆ. ಈ ಮಧ್ಯೆ ಅಸ್ಪಷ್ಟವಾಗಿ

'ದಾದಾ' ಎನ್ನುವನು.

'ಬೇಟಾ' ಎಂದು ಮರುದನಿ ವೃದ್ಧನ ಹೃದಯವನ್ನು ಸೀಳಿಕೊಂಡು ಹೊರಬರುವುದು. ವಿಧಿಯಿಲ್ಲದೆ, ರೈಲ್ವೆಯ ಅಧಿಕಾರಿಗಳ ಒತ್ತಾಯದಿಂದ ಇಬ್ಬರೂ ಬೇರೆಬೇರೆಯಾದರು. ರೈಲು ಮೆಲ್ಲನೆ ಹೊರಟೂ ಬಿಟ್ಟಿತು........ ರೈಲಿನೊಂದಿಗೆ ಮಹಮ್ಮದನು ಮಗನನ್ನೇ ದಿಟ್ಟಿಸಿ ನೋಡುತ್ತಾ ಓಡುವನು. ಮಗನು ಬಗ್ಗಿ ತಂದೆಯ ಗಡ್ಡವನ್ನು ನೇವರಿಸುತ್ತ

'ದಾದಾ........ದಾದಾ....' ಎಂದು ಆರ್ತನಂತೆ ಕೂಗುವನು. ಕಾಲು ಸೋತು ಮಹಮ್ಮದನು ನಿಂತುಬಿಟ್ಟನು. ರೈಲು ವೇಗವೇಗವಾಗಿ ಕಣ್ಣಿಗೆ ಕಾಣದೆ ಹೊರಟುಹೋಯಿತು. ಮಹಮ್ಮದನು ಕಾಲೆಳೆದುಕೊಂಡು ಮೆಲ್ಲನೆ ಹಿಂತಿರುಗಿದನು. ಅವನ ಬಾಯಲ್ಲಿ ಮೂರೇ ಮಾತುಗಳು........ಮಂತ್ರೋಚ್ಚಾರಣೆಯಂತೆ ತಡೆತಡೆದು ಸ್ಪಷ್ಟವಾಗಿ ಹೊರಬರುತ್ತಿದ್ದವು. ಅಕ್ಕಪಕ್ಕದಲ್ಲಿ ಹೋಗುತ್ತಿದ್ದವರು ವೃದ್ಧನನ್ನು ದಿಗ್ಭ್ರಾಂತರಂತೆ ನೋಡಿಕೊಂಡು ನಗುತ್ತ ಹೋಗುತ್ತಿದ್ದರು. ಆದರೆ ಬಗ್ಗಿದ ಕತ್ತನ್ನೆತ್ತದೆ ಮಹಮ್ಮದನು ಮುಂದೆ ಸಾಗುತ್ತಲಿದ್ದನು. ಅವನ ಬಾಯಿಂದ ಮಾತ್ರ ತಡೆಯಿಡೆಯಿಲ್ಲದೆ

'ಬೇಟಾ........ದಾದಾ........ಖುದಾ............'

ಎಂಬ ಮೂರು ಮಾತುಗಳು ಹೊರಡುತ್ತಿದ್ದವು.

೨

ಕಲ್ಕತ್ತೆಯ 'ಪಾರ್ಸಿ ನಾಟಕಮಂಡಳಿ'ಗೂ ಉಸ್ಮಾನನಿಗೂ ಗೆಳೆತನವಾಗಿ ಐದು ವರ್ಷಗಳಾಗಿತ್ತು. ಇಂದವನು ಐದುವರ್ಷಗಳ ಹಿಂದೆ ಹೊಟ್ಟೆ ಹೊರೆಯಲು ಕಂಪೆನಿಯನ್ನು ಸೇರಿದ ಬಡ ಉಸ್ಮಾನನಲ್ಲ. ಕಂಪೆನಿಯ ಪ್ರಧಾನ ನಟಶ್ರೇಷ್ಠನಾದ ಗವಯ್ ಉಸ್ಮಾನ್‌ಖಾನ್ ಸಾಹೇಬ್. ಬಣ್ಣವಿಲ್ಲದ, ಬೆಳಕಿಲ್ಲದ, ಸೊಗಸಿಲ್ಲದ ಬಡಕೂಲೀರಜೀವನದಿಂದ ರಂಗುರಂಗಾದ ರಂಗಸಾಮ್ರಾಜ್ಯದ ಸಿಂಹಾಸನವನ್ನು ಒಮ್ಮೆಲೇ ಅಡರಿದ್ದ ಉಸ್ಮಾನನಿಗೆ ತನ್ನ

ಹಿಂದಿನ ಜೀವನವು ಕ್ರಮೇಣ ಮರೆಯುತ್ತ ಬಂದಿತ್ತು. ತಾನು ತಂದೆಯ ನ್ನಗಲಿ ಬಂದಂದಿನಿಂದ ಈ ಐದುವರ್ಷಗಳು ವಿದ್ಯಾರ್ಜನೆಗಾಗಿ ಪಟ್ಟ ಕಷ್ಟದ ನೆನಪೂ ಮರೆತುಹೋಗಿತ್ತು. ತನ್ನ ಇಂದಿನ ದೆಸೆಗೆ ತಂದೆಯ ಸಹನೆ, ನಿರ್ವ್ಯಾಜ್ಯ ಅಂತಃಕರಣ, ಆತ್ಮಾರ್ಪಣಗಳೆಷ್ಟುಕಾರಣವೆಂಬುದರ ಸ್ಮರಣವೂ ಅಳಿಸುತ್ತ ಬಂದಿತ್ತು. ತನ್ನ ಘನತೆಯು ಯಾವ ಸ್ಥಾನದಲ್ಲಿದೆ ಮುಂದೆ ಯಾವಸ್ಥಾನಕ್ಕೇರುತ್ತದೆ ಎಂಬುದರ ಕಡೆಗೇ ಅವನ ಲಕ್ಷ್ಯ. ಹೀಗಾಗಿ ಐದುವರ್ಷಗಳ ರಣಸಾಧನೆಯಿಂದ 'ಗವಯ್' ಸ್ಥಾನಕ್ಕೆ ಉಸ್ಮಾನ ನೇರಿ ತನ್ನ ಕಂಪೆನಿಯ ಯಜಮಾನನ ಹಾಗೂ ಪ್ರೇಕ್ಷಕವರ್ಗದ ಪೂರ್ಣಾ ಭಿಮಾನವನ್ನು ದೊರಕಿಸಿಕೊಂಡಿದ್ದನು. ಉಸ್ಮಾನನ ಮಧುರ ಕಂಠದ ಮನೋಹರ ಗಾನಕ್ಕೆ ಎಲ್ಲರೂ ಮೈಮರೆತಿದ್ದರು. ಉಸ್ಮಾನನೇ ಒಮ್ಮೊಮ್ಮೆ ತನ್ನ ಸಂಗೀತದಲ್ಲಿ ತಾನೇ ಮೈಮರೆತುಬಿಡುವನು. ರಂಗಕ್ಕೊಪ್ಪುವ ರೂಪ ಲಾವಣ್ಯಗಳೂ ಇದ್ದುದರಿಂದ ಉಸ್ಮಾನನು ಮುಂದಕ್ಕೆ ಬೇಗ ಬರಲು ಬಹಳ ಅನುಕೂಲವಾಯಿತು. ಮಜನೂನ್, ಫರ್ಹಾದ್, ಸುಲೇಮಾನ್, ದುಷ್ಯಂತ ಮೊದಲಾದ ಶೃಂಗಾರರಸಪ್ರಧಾನವಾದ ಪಾತ್ರಗಳಲ್ಲಿ ಉಸ್ಮಾನನು ಹೆಸರು ಪಡೆದಿದ್ದನು.

ಮೊನ್ನಿನ ದಿವಸಗಳ ಭಿಕ್ಷುಕಾವಸ್ಥೆಯೂ ತೀರಿತ್ತು. ನಿನ್ನಿನ ದಿವಸ ಗಳ ಸಾಧಕಾವಸ್ಥೆಯೂ ತೀರಿತ್ತು. ಇಂದು ಉಸ್ಮಾನನು ಸಿದ್ಧಪುರುಷ. ಅವನ ಸಣ್ಣಮಾತೇ ಅನುಯಾಯಿಗಳಿಗೆ ಮಹದಾಜ್ಞೆಯಂತೆ ಬೋಧೆಯಾ ಗುತ್ತಿತ್ತು. ಮಂಡಳಿಯ ಮಾಲೀಕನಿಂದ ಮೊದಲ್ಗೊಂಡು ಸಣ್ಣ ಸೇವಕನ ವರೆಗೂ ಎಲ್ಲರಿಗೂ ಉಸ್ಮಾನನ ಮನಸ್ಸನ್ನು ಮೆಚ್ಚಿಸುವುದೇ ಮುಖ್ಯ ಕರ್ತವ್ಯ ವಾಗಿ ತೋರುತ್ತಿತ್ತು. ಹೀಗಾಗಿ ಪಾರ್ಸಿಕಂಪೆನಿಯ ಅನಭಿಷಿಕ್ತಪ್ರಭು ವೆಂದರೆ ಉಸ್ಮಾನನೆಂದಾಯಿತು. ನಾಟಕಗಳನ್ನು ಸ್ವೀಕರಿಸಬೇಕಾದರೆ ಉಸ್ಮಾನನ ಅಪ್ಪಣೆಯಾಗಬೇಕು. ಹೊಸ ನಟರನ್ನು ಮಂಡಳಿಗೆ ಸೇರಿಸಿ ಕೊಳ್ಳಬೇಕಾದರೆ ಉಸ್ಮಾನನೊಪ್ಪಬೇಕು. ನಾಟಕಗಳನ್ನು ಪ್ರದರ್ಶಿಸ ಬೇಕಾದರೆ ಉಸ್ಮಾನನ ಮನಸ್ಸು ಸಮಾಧಾನವಾಗಿರಬೇಕು. ಮಂಡಳಿಯ ಎಲ್ಲ ಕಾರ್ಯಗಳೂ ಉಸ್ಮಾನನ ಇಚ್ಛಾನುಸಾರವಾಗಿಯೇ ನಡೆಯಲಾರಂಭ ವಾದವು.

ಪಾರ್ಸಿಕಂಪೆನಿಯಲ್ಲಿ ಉಸ್ಮಾನನೇ ನಾಯಕ, ಪ್ಯಾರಿಯೇ ನಾಯಕಿ. ಉಸ್ಮಾನನ ಖ್ಯಾತಿಯನ್ನು ಕೇಳಿ ತಾನಿದ್ದ ಕಂಪೆನಿಯನ್ನು ಬಿಟ್ಟು 'ನಾಯಕಿ' ಪಾತ್ರಗಳನ್ನಭಿನಯಿಸಲು ಪ್ಯಾರಿಯು ಬಂದಿದ್ದಳು. ಅವಳನ್ನು ಕಂಪೆನಿಗೆ ಸೇರಿಸುವ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿದವು. ಬಹಳ ಕಂಪೆನಿಗಳನ್ನೂ ಅವುಗಳ ಮಾಲೀಕರನ್ನೂ ದಿವಾಳಿ ಎಬ್ಬಿಸಿದ ಸ್ವೈರಿಣಿಯೇ ಇವಳೆಂದು ಕೆಲವು ನಟರ ಆರೋಪ. ಅವಳು ಕೇಳುವ ಸಂಬಳ ತಮ್ಮ ಯೋಗ್ಯತೆಗೆ ಮೀರಿದ್ದೆಂದು ವ್ಯವಸ್ಥಾಪಕರ ಗೊಣಗು. ಆದರೆ 'ಅವಳ ಶಾರೀರ ಚೆನ್ನಾಗಿದೆ, ಇರಲಿ' ಎಂದು ಉಸ್ಮಾನನ ಮತ. ಅದೇ ನಿರ್ಧಾರವಾಗಿ ಹೋಯಿತು.

ತೆಳ್ಳನೆಯ ಬೆಳ್ಳನೆಯ ದೇಹ; ನೀಳವಾದ ಗುಂಗುರು ಗುಂಗುರು ಕೇಶರಾಶಿ; ವಿಶಾಲವಾದ ಚಂಚಲವಾದ ಕಣ್ಣಾಲಗಳು; ಸ್ವಲ್ಪ ಸೊಟಕಾದರೂ ಮಾಟವನ್ನು ಕೆಡಿಸದ ನಾಸಿಕ. ಅದರಮೇಲೆ ಮುತ್ತಿನ ಮೂಗುತಿ. ಕರ್ಣಗಳಲ್ಲಿರಡು ವಜ್ರದ ಲೋಲಾಕುಗಳು. ಗುಲಾಬಿಯ ಬಣ್ಣದ ಮಾದರಿಯ ಕುಪ್ಪಸದಮೇಲೆ ಕಿತ್ತಲೆಯ ಬಣ್ಣದ ತೆಳ್ಳನೆಯ ಸೀರೆ. ಕಾಲಿಗೆ ಹೊಗೆಲಸ ಮಾಡಿದ ಚಮಕಿಯ ಪಾಪಾಸುಗಳು. ಕೈಯಲ್ಲಿ ರೇಶ್ಮೆಯ ಧನಚೀಲ. ಮಾತಿನಲ್ಲಿ ಕೃತ್ರಿಮವೆನ್ನುವಂತಹ ನಯದ ಮೆರುಗು, ಇವುಗಳಿಗೆ ಉಸ್ಮಾನನು ಬೆರಗಾಗಿದ್ದನೋ ಪ್ಯಾರಿಯ ನೈಜವಾಗಿಯೂ ಕೋಮಲವಾಗಿದ್ದ 'ಶಾರೀರ'ಕ್ಕೆ ಮನಸೋತಿದ್ದನೋ ಅಂತೂ ಪ್ಯಾರಿಯು ಅವನ ನಾಯಕಿಯಾಗಿ ಕಂಪೆನಿಯಲ್ಲಿ ನಿಂತಳು.

ಉಸ್ಮಾನ್-ಪ್ಯಾರಿಯವರ ಗಾನ ಅಭಿನಯಗಳನ್ನು ನೋಡಲು ದಿಗ್ದೇಶಗಳಿಂದ ಜನರು ಬರುವಂತಾದರು. ಎಲ್ಲ ನೋಡಿದರೂ ಅವರ ಕೀರ್ತಿಯ ಗಾನ. ಯಾರ ಬಾಯಲ್ಲಿ ನೋಡಿದರೂ ಅವರ ಹಾಡಿಕೆಯ ಕುರುಕು ಪದಗಳು. ದೆಸೆದಿಕ್ಕುಗಳಲ್ಲೆಲ್ಲಾ ಉಸ್ಮಾನ-ಪ್ಯಾರಿಯವರ ಕೀರ್ತಿಲತೆಯು ಹಬ್ಬಿ ಪಸರಿಸಿತು.

ಉಸ್ಮಾನ್-ಪ್ಯಾರಿಯವರ ಖ್ಯಾತಿ ಹಬ್ಬಿದಂತೆಯೇ ನೀತಿಯ ಚರಿತೆಯೂ ಹಬ್ಬತೊಡಗಿತು. ಪ್ಯಾರಿಗೆ ವಿರೋಧವಾಗಿದ್ದ ನಟರೇ ಅವಳಮೇಲೆ ಇಲ್ಲ

ಸಲ್ಲದ ಆರೋಪಗಳನ್ನು ಹೊರಿಸಿ, ಹೊರಗೂ ಹರಡುತ್ತಿದ್ದರು. ಒಮ್ಮೊಮ್ಮೆ
ಕೆಟ್ಟ ಅರ್ಥ ಸೂಚನೆಯಾಗುವಂತೆ ಪತ್ರಿಕೆಗಳಲ್ಲಿಯೂ ಸುದ್ದಿಗಳು ಪ್ರಕಟ
ವಾಗುತ್ತಿದ್ದವು. ರಂಗದ ನಾಯಕಿಯು ಉಸ್ಮಾನನ ಜೀವನಕ್ಕೂ ಕಾಲಿಡುತ್ತ
ಬಂದಳು. ರಂಗದ ಶಿರೀನಳು....ಕೃತ್ರಿಮ ಜೀವನದ ಬುಲ್ಬಿಕಳು....ವಿಡಂಬನ
ಬಾಳಿನ ಶಕುಂತಲೆಯು....ಅಭಿನಯ ಸಾಮ್ರಾಜ್ಯದ ಲೈಲಾ....ಜೀವನದಲ್ಲಿ
ಯೂ ತನ್ನ ಪ್ರಭೆಯನ್ನು ಬೀರತೊಡಗಿದಳು. ಪ್ರೇಮದ ದಾರಿದ್ರ್ಯದಿಂದ
ಒಣಗಿ ನಿಂತಿದ್ದ ಉಸ್ಮಾನನ ಹೃದಯ ಕಾನನವನ್ನು ಆ ದಳ್ಳುರಿಯು ಬೇಗ
ಬೇಗನೆ ದಹಿಸಲಾರಂಭಿಸಿತು. ತಾನು....ತನ್ನ ಸ್ಥಾನಮಾನಗಳು....ವಿದ್ಯೆ
ಪದವಿಗಳು ಅವಳ ಸ್ಮರಣೆಯಿಂದ ಸಂಪೂರ್ಣವಾಗಿ ಅಳಿಸಿ ಹೋಗುತ್ತ
ಬಂದವು. ನಿಂತಲ್ಲಿ, ಕುಳಿತಲ್ಲಿ, ಇದ್ದಲ್ಲಿ ಹೋದಲ್ಲಿ ಅವನ ಕಣ್ಣಿಗೆ ಕಾಣು
ತ್ತಿದ್ದುದು ಒಂದೇ ರೂಪ ಪ್ಯಾರಿಯದು. ಪ್ರೇಮದ ಪವಿತ್ರ ಜೀವನಕ್ಕೆ
ಸಿದ್ಧವಾಗುವ ಸಮಯಕ್ಕೆ ಸರಿಯಾಗಿ ಮೋಹದ ಕುತ್ತು ಉಸ್ಮಾನನ ಅಂತಃ
ಕರಣವನ್ನು ಕತ್ತರಿಸತೊಡಗಿತು. ತನಗವಳು ಒಲಿದಾಗ ವಿನಮ್ರ ಭಕ್ತ
ನಂತೆ ದೀನನಾಗಿ ತನ್ನದೆಲ್ಲವನ್ನೂ ಅರ್ಪಿಸಿಬಿಡುವನು; ತಿರಸ್ಕರಿಸಿದಾಗ
ಮೊಣಕಾಲೂರಿ ತಿರುಕನಂತೆ ಪ್ರಣಯಭಿಕ್ಷೆಯನ್ನು ಬೇಡುವನು. ಪ್ಯಾರಿಯು
ತನ್ನ ಹಳೆಯ ಗೆಳೆಯರನ್ನರಸುತ್ತ 'ಅಭಿಸಾರಿಕೆ'ಯ ಪಾತ್ರವನ್ನಭಿನಯಿಸ
ತೊಡಗಿದಾಗ ರೋಷಾಕ್ರಾಂತನಾಗಿ ಝುರ್ಝುರಿಸಿ ಹೋಗುವನು. ಆದರವಳು
ಹಿಂದಿರುಗಿ ಕಣ್ಣನೋಟವನ್ನೊಮ್ಮೆ ತೇಲಿಸಿದೊಡನೆಯೇ ಚಂಡಜ್ವಾಲೆಗೆ ಕರ
ಗುವ ಮಂಜುವೆಟ್ಟದಂತೆ ಕರಗಿ ಅವಳ ಪಾದಗಳನ್ನು ಕಣ್ಣೀರಿನಿಂದ ತೊಳೆದು
ಬಿಡುವನು. ಅವಳು ಮುನಿದು ಮಾತನಾಡದೆ ಕುಳಿತಾಗ ದೇವಿಯುಪಾಸಕ
ನಂತೆ ಆಕೆಯ ಕೃಪಾಕಟಾಕ್ಷವು ಬೇಗಬೀಳುವಂತೆ ಮಾಡೆಂದು 'ಖುದಾ'ನನ್ನು
ಪ್ರಾರ್ಥಿಸುವನು. ಅಂತೂ ಸರಳವೂ ಶುಭ್ರವೂ ಪವಿತ್ರವೂ ಆಗಿದ್ದ ಉಸ್ಮಾನನ
ಮನಸ್ಸು ಅಸಹಜವಾದ ಭಯಂಕರ ತಾಂಡವದ ರಂಗಮಂಟಪವಾಗಿ ಪರಿ
ಣಮಿಸಿತು. ಇದರ ಶಾಂತಿಗೆ ಪ್ಯಾರಿಯು ತನ್ನ ಅಮೃತ ಹಸ್ತದಿಂದಲೇ
ಮೊದಲನೆಯಸಲ ಅರ್ಪಿಸಿ ಪಾಠಗಲಿಸಿದ್ದ ಮಧುವಿನಲ್ಲಿ ಮೈಮರೆಯಲೆತ್ನಿ
ಸುವನು. ಮೋಹದ ಪೀಡೆಯೊಂದೆಡೆಯಲ್ಲಿ, ಮಧುವಿನ ವಿಲೋಭನೆ
ಮತ್ತೊಂದೆಡೆಯಲ್ಲಿ; ಇವುಗಳ ಮಧ್ಯೆ ಸಿಲುಕಿ ಉಸ್ಮಾನನು ತನ್ನನ್ನೇ ತಾನು
ಮರೆತುಬಿಟ್ಟನು. ಮನಸ್ಸು ಬಂದರೆ ರಂಗದಲ್ಲಿ ಸರಿಯಾಗಿ ಅಭಿನಯಿಸು

ವನು. ಇಲ್ಲದಿದ್ದರೆ ವಕ್ರಚೇಷ್ಟೆಗಳನ್ನು ಮಾಡಿ ಅಸಂಬದ್ಧ ಪ್ರಲಾಪವಲ್ಲಿ ಪಾತ್ರಗೆಲಸವನ್ನು ಹಾಗೂ ಹೀಗೂ ಮುಗಿಸಿಬಿಡುವನು.

೩

ನಗರದ ಪಶ್ಚಿಮ ಕೊನೆಯಲ್ಲಿ ಕೆಲವು ಗುಡಿಸಲುಗಳು. ಎಲ್ಲವೂ ಬಡತನದಲ್ಲಿ ಬಾಳನ್ನು ಹೊರಲಾರದೆ, ಹೊರೆಯಲಾರದೆ, ನೀಗಲಾರದೆ ಇರುವವರ ಮನೆಗಳು. ಭಿಕ್ಷಾಟನೆಯಲ್ಲಿ ಅಂದಿನ ಗ್ರಾಸವನ್ನು ಸಂಪಾದಿಸುವುದು. ಮನೆಗೆ ಬಂದು ತಿಂದು ಮುಗಿಸುವುದು. ನಿಶ್ಚಿಂತರಾಗಿ ಮಲಗಿ ನಿದ್ರಿಸುವುದು. ಎದ್ದು ಯಥಾವಿಧಿಯಾಗಿ ಸಾರಂಗಿಯನ್ನೋ ಪಿಟೀಲನ್ನೋ ಹಿಡಿದು ಹೊರಡುವುದು. ಮಳೆಗಾಲದಲ್ಲಿ ಚಾವಣಿಯೊಳಗೆ ನುಗ್ಗಿ, ನೆನೆಯದಂತೆ ಕೂರಲು ಕೂಡ ಅವಕಾಶವೀಯದೆ ಒಳಗೆಲ್ಲಾ ಧಾರೆಬಂದು ನಿಲ್ಲುವುದು. ಆಗ ಯಾರಮನೆಯ ಜಗುಲಿಯನ್ನಾದರೂ ಆಶ್ರಯಿಸಿ ತಲೆ ಮರೆಮಾಡಿಕೊಂಡು ನಿಂತಿದ್ದು ಮಳೆಬಿಟ್ಟೊಡನೆಯೇ ಮನೆಯನ್ನು ಸೇರಿಕೊಳ್ಳುವುದು.

ಇಂತಹ ಮನೆಯೊಂದು ಮಹಮ್ಮದನಿಗೂ ಸೇರಿತ್ತು. ತಾನೇ ಅದನ್ನು ತೈಯಾರ ಕಟ್ಟಿದ್ದನು. ತನ್ನ ಗತಿಸಿದ ಹೆಂಡತಿಯ ಹೆಸರಿನಲ್ಲಿ ಅದನ್ನು ಪ್ರೀತಿಯಿಂದ 'ಅಮೀನಾ ಮಹಲ್' ಎಂದು ಕರೆಯುತ್ತಿದ್ದನು. ತನ್ನ ಉಸ್ಮಾನನು ಮದುವೆಯಾಗಿ ಸೊಸೆಯನ್ನು ಮನೆಗೆ ಕರೆತಂದರೆ ಅವರಿಗಾಗಿ ಒಂದೆರಡು ಕೋಣೆಗಳನ್ನು ಕಟ್ಟಬೇಕು. ತನ್ನ ಸೊಸೆಯು ಎಂದೆಂದಿಗೂ 'ಇಂತಹ ಮಾವ ಮತ್ತು ಇವನೇ ಪತಿಯನ್ನು ಅಲ್ಲಾ ದಯಪಾಲಿಸಲಿ' ಎಂದು ಪ್ರಾರ್ಥಿಸುವಂತೆ ಅವಳನ್ನು ಸ್ವಂತ ಮಗಳಿಗಿಂತಲೂ ಹೆಚ್ಚಿನ ವಿಶ್ವಾಸದಿಂದ ಕಾಪಾಡಿಕೊಂಡು ಬರಬೇಕು ಎಂದು ಕನಸುಕಾಣುವನು. ಮಹಮ್ಮದನ ಆತ್ಮದ ಹಕ್ಕಿಯು ಉಸ್ಮಾನನ ಅಂತರಂಗದಲ್ಲಿ ಗೂಡುಮಾಡಿಕೊಂಡಿತ್ತು. ಸಾರಂಗಿಯನ್ನು ಬಾರಿಸುತ್ತ ಬಾರಿಸುತ್ತ ಉಸ್ಮಾನನನ್ನು ನೆನೆದು ದೀರ್ಘವಾಗಿ ನಿಟ್ಟುಸಿರು ಬಿಡುವನು. ಈ 'ಅಸಾವೇರಿ' ಚೀಟಾ ಹಾಡಿದರೆ ಎಷ್ಟು ಚೆನ್ನಾಗಿರುತ್ತಿತ್ತು.... ಈ 'ಹಿಂದೋಲ' ಚೀಟಾನ ಧ್ವನಿಗೆ ಎಷ್ಟು ಚನ್ನಾಗಿ ಕೂಡುತ್ತೆ.... ಈ 'ಭೈರವಿ' ಚೀಟಾನ ಯೋಗ್ಯತೆ ಎಷ್ಟು ಚೆನ್ನಾಗಿ ತೋರುತ್ತೆ! ಎಂದು ಅಂದುಕೊಳ್ಳುವನು. ಬೇಸತ್ತು ಮನೆಗೆ ಬಳಲಿ

ಬಂದು ಒಮ್ಮೊಮ್ಮೆ ಹಿಂದಿನ ಅಭ್ಯಾಸಬಲದಿಂದ 'ರೇ ಬೇಟಾ....ಉಸ್ಮಾನ್' ಎಂದು ಗಟ್ಟಿಯಾಗಿ ಕೂಗುವನು. ಉಸ್ಮಾನನು ದೂರದ ಕಲ್ಕತ್ತೆಯಲ್ಲಿರುವುದನ್ನು ನೆನೆದು 'ಹಾಯ್' ಅಂದುಕೊಳ್ಳುವನು. ತನ್ನ ಗೋಡೆಗಳನ್ನಲಂಕರಿಸಿದ್ದ ಉಸ್ಮಾನನ ಅಭಿನಯ ಚಿತ್ರಗಳೇ ಮುಹಮ್ಮದನಿಗೆ ನೆಳಲೀಯುತ್ತಿದ್ದ, ಶಾಂತಿಯೆರೆಯುತ್ತಿದ್ದ ಕಲ್ಪವೃಕ್ಷಗಳು. ಚಿತ್ರಗಳೆದುರಿಗೆ ಕಣ್ಣುಗಳನ್ನರಳಿಸಿ ನಿಂತು ಪ್ರೇಮ....ಕುತೂಹಲ....ಹೆಮ್ಮೆ....ಅನಿರೀಕ್ಷಿತಭಯ.....ಲೋಚನಗಳಿಂದ ಅವುಗಳನ್ನು ನೋಡುತ್ತ ಉಸ್ಮಾನನನ್ನು ಅಪ್ಪಿ ಚುಂಬಿಸುತ್ತಿದ್ದಂತೆ ಅವುಗಳನ್ನು ಅಪ್ಪಿ ಚುಂಬಿಸುವನು.

'ಹೇಗಾದರೂ ಮಾಡಿ ಒಮ್ಮೆ ಕಲ್ಕತ್ತೆಗೆ ಹೋಗಿ ಮಗನ ವೈಭವವನ್ನು ನೋಡಿ ಬರಲೇ' ಎಂದಂದುಕೊಳ್ಳುವನು. ಮರುಕ್ಷಣವೇ ರಾಜವೇಷ ಭೂಷಿತನಾಗಿ ಚಿಲಿಬಾಳುವ ಮೋಟಾರು ಗಾಡಿಯಲ್ಲಿ ನಗುಮೊಗದಿಂದ ಕುಳಿತಿದ್ದ ತನ್ನ ಮಗನ ಚಿತ್ರದಕಡೆ ದೃಷ್ಟಿಯನ್ನು ತಿರುಗಿಸಿ 'ಛೆ! ಈಗವನು ರಾಜಕುಮಾರನಹಾಗಿದ್ದಾನೆ. ನಾನು ಬಡತಿರುಕ. ಅವನನ್ನು ಯಾತಕ್ಕೆ ಪೀಡಿಸಲಿ....ನಾನು ಯಾರೆಂದು ಅವನ ಸ್ನೇಹಿತರು ಕೇಳಿದರೆ 'ನನ್ನ ತಂದೆ' ಎಂದು ಹೇಳಿಕೊಳ್ಳಲು ಅವನಿಗೆಷ್ಟು ನಾಚಿಕೆ'....ಅದನ್ನೇ ಕುರಿತು ಬಹಳ ಹೊತ್ತು ಯೋಚಿಸಿದನು. 'ನಾನು ತಿರುಕ....ನಿಜ. ಕಲ್ಕತ್ತೆಗೆ ಹೋದರೆ ನನ್ನ ಮಗ ನನ್ನನ್ನು ತಿರುಕನೆಂದು ತಿರಸ್ಕರಿಸುವನೇ' ಎಂದು ಚಿಂತಿಸಿದನು. ತನ್ನ ಮೌಢ್ಯಕ್ಕೆ ತನ್ನನ್ನೇ ನಿಂದಿಸಿಕೊಳ್ಳುತ್ತ ಮರುಕ್ಷಣವೇ ನಗುವನು.

ಉಸ್ಮಾನನು ತಂದೆಯನ್ನು ಬಿಟ್ಟು ಆರುವರ್ಷಗಳಾಗುತ್ತ ಬಂದಿತ್ತು. ಕಳೆದ ಒಂದು ವರ್ಷದ ತನಕ ತಂದೆಗೆ ತಪ್ಪದೆ ಕಾಗದಗಳನ್ನು ಬರೆಯುತ್ತಿದ್ದುದಲ್ಲದೆ ಆಗಿಂದಾಗ್ಗೆ ಸ್ವಲ್ಪ ಹಣವನ್ನೂ, ತನ್ನ ಅಭಿನಯ ಚಿತ್ರಗಳನ್ನೂ ಕಳುಹಿಸುತ್ತಿದ್ದವನು ಈಚೆಗೆ ತಾಟಸ್ಥ್ಯವನ್ನು ತಾಳಿಬಿಟ್ಟಿದ್ದನು. 'ಇಂದು ಬರಬಹುದು....ನಾಳೆ ಬರಬಹುದು' ಎಂದು ಕಾಗದವನ್ನು ನಿರೀಕ್ಷಿಸಿ ನಿರೀಕ್ಷಿಸಿ ಮುಹಮ್ಮದನು ಚಿಂತೆಯಿಂದ ಕಂಗೆಟ್ಟುಹೋಗಿದ್ದನು. 'ಕಾಹಿಲೆ ಬಿದ್ದಿರಬಹುದೇ?' ಎಂದು ಯೋಚಿಸುವನು. ಹೇಗೆ ಹೇಗೆ ಯೋಚಿಸಿದರೂ ಬಗೆಹರಿಯದಾಯಿತು. ಪಾರ್ಸಿಕಂಪೆನಿಯ ವ್ಯವಸ್ಥಾಪಕರಿಗೆ ಪತ್ರಬರೆದನು. ಅವರಿಂದಲೂ ಮಾರೋಲೆ ಬರಲಿಲ್ಲ. ಮುಹಮ್ಮದನಿಗೆ ದುಃಖವು ಹಿಡಿಸ

ವಾಯಿತು. ಹೇಗಾದರೂ ಮಾಡಿ ಕಲ್ಕತ್ತೆಗೆ ಹೋಗಿಯೇ ಹೋಗಿ ಮಗ ನನ್ನು ನೋಡಿ ಬರಬೇಕೆಂದು ಸಂಕಲ್ಪಿಸಿಕೊಂಡನು.

ಕೈಯಲ್ಲಿ ಹಣವಿತ್ತು. ದುಡಿದುಡಿದು....ನಾಳೆ ಉಸ್ಮಾನನು ದುಡುಕಿ ಯಾಗಿ ಮನೆಗೆ ಬಂದರೆ ಅವನ ಹೆಂಡತಿಗೆ ಒಂದು ಒಳ್ಳೆಯ ಸೀರೆಯನ್ನು ಕೊಂಡುಕೊಡಬೇಕೆಂದೂ, ಮನೆಯನ್ನು ಸ್ವಲ್ಪ ದೊಡ್ಡದು ಮಾಡಬೇಕೆಂದು ಸಂಗ್ರಹಿಸಿಟ್ಟಿದ್ದ ೧೦೦ ರೂಪಾಯಿಗಳು. 'ಅವನ್ನು ಈಗ ಉಪಯೋಗಿಸಿ ಕೊಳ್ಳಬೇಕಲ್ಲಾ....ಉಪಯೋಗಿಸಿಕೊಳ್ಳದಿದ್ದರೆ ಮಾರ್ಗವಿಲ್ಲ' ಎಂದು ೫೦ ರೂಪಾಯಿಗಳನ್ನು ತೆಗೆದುಕೊಂಡು ದಾರಿಯ ಭೋಜನಕ್ಕೆ ೮-೧೦ ರಾಗಿಯ ರೊಟ್ಟಿಗಳ ಬುತ್ತಿಯನ್ನು ಕಟ್ಟಿಕೊಂಡು ಅಂದಿನ ರಾತ್ರಿಯೇ ರೈಲು ಹತ್ತಿ ಬಿಟ್ಟನು.

ಕಲ್ಕತ್ತೆಯಂತಹ ವಿಶಾಲವಾದ ಶ್ರೀಮಂತನಗರದಲ್ಲಿ ಬಡ ಮಹಮ್ಮದ ನನ್ನು ಕೇಳುವವರಾರು? ಅಪರಿಚಿತ ಸ್ಥಳ....ಅಪರಿಚಿತರ ವಾತಾವರಣ.... ಜೊತೆಗೆ ಇರುವ ಅಲ್ಪಹಣವನ್ನು ಯಾರು ಕದ್ದುಬಿಡುವರೋ ಎನ್ನುವ ಭೀತಿ !!! ಊರನ್ನು ಸುತ್ತಿಸುತ್ತಿ ಬೇಸತ್ತನು. ಉಸ್ಮಾನನನ್ನು ತೋರುವವರು ಒಬ್ಬರೂ ಸಿಕ್ಕರು. ಕೊನೆಗೆ ಉಸ್ಮಾನನು ಸೇರಿದುದು ಪಾರ್ಸಿ ಕಂಪೆನಿ ಯೆಂದು ಜ್ಞಾಪಿಸಿಕೊಂಡು ಕಲ್ಕತ್ತೆಯ ಪಾರ್ಸಿ ಕಂಪೆನಿಗಳೆಲ್ಲವರಲ್ಲಿಯೂ ಉಸ್ಮಾನನನ್ನರಸುತ್ತ ಹೊರಟನು.

ಕೊನೆಗೆ....ಮೂರು ದಿವಸಗಳ ನಿರರ್ಥಕ, ನಿಷ್ಪ್ರಯೋಜಕ ಅಲೆದಾಟ ತೀರಿದಮೇಲೆ....ಉಸ್ಮಾನನ 'ಪಾರ್ಸಿ ಕಂಪೆನಿ'ಯ ಗುರುತು ಸಿಕ್ಕಿತು. ಮಹಮ್ಮದನ ಎದೆಯು ಉದ್ವೇಗದಿಂದ ಬಡಿದುಕೊಳ್ಳಲಾರಂಭಿಸಿತು. 'ತನ್ನ ಮಗನಿಗೆ ತನ್ನ ಗುರುತು ಸಿಕ್ಕುವುದೋ....ಸಿಕ್ಕದಿದ್ದರೇನು ಗತಿ?' ಕಂಪೆ ನಿಯ ಅಂಗಣದೊಳಗೆ ಹೋಗುವಷ್ಟರಲ್ಲಿ ಒಳಗಿನಿಂದ ಒಂದು ಮೋಟಾರು ಬಂದಿ ಮಹಮ್ಮದನೆದುರಿಗೆ ಹೊರಟುಹೋಯಿತು. ಒಳಗಿದ್ದ ಪುರುಷ ವ್ಯಕ್ತಿಯು ಕಣ್ಣೆದುರಿಗೆ ಸುಳಿದಂತಾಯಿತು....ಉಸ್ಮಾನನಿಗೆ ಬಹಳ ಸಮೀಪದ ಹೋಲಿಕೆ....ಅವನೇ ಇರಬಹುದೇ? ಒಳಹೊಕ್ಕು ಅಲ್ಲಿದ್ದ ಒಬ್ಬ ನೌಕರ ನನ್ನು ವಿಚಾರಿಸಿದನು. ಅವನು ಈ ವೃದ್ಧವ್ಯಕ್ತಿಯ ಸಲಿಗೆಯ ಸಂಬೋಧ

ನಗೆ ಜೊರಗಾಗಿ 'ಅಹುದು. ಅವರೇ ಗವಯ್ ಉಸ್ಮಾನ್‌ಖಾನ್ ಸಾಹೇಬರು' ಎಂದು ಉತ್ತರವಿತ್ತನು. ಮಹಮ್ಮದನಿಗೆ ಎದೆಯ ಹಂಬಲ ಹೆಚ್ಚಾಯಿತು.

'ಈಗೆಲ್ಲಿಗೆ ಹೊರಟಿದ್ದಾರೆ?' ಎಂದು ಕೇಳಿದನು.

'ಡೆಲ್ಲಿಗೆ. ಕಂಪೆನಿಯು ಅಲ್ಲಿಗೆ ಹೋಗಿದೆ. ಇವತ್ತಿನ ರೈಲಿನಲ್ಲಿ ಖಾನ್ ಸಾಹೇಬರು ಹೋಗುತ್ತಾರೆ' ಎಂದು ಆ ನೌಕರನು ಮಾರುತ್ತರವಿತ್ತನು. ಮಹಮ್ಮದನಿಗೆ ಭೂಮ್ಯಾಕಾಶಗಳು ಒಂದಾದಂತಾದವು. ಏಳುವುದನ್ನು ಬೀಳುವುದನ್ನು ನೋಡದೆ ರೈಲ್ವೆಯ ಸ್ಟೇಷನ್ ಬಳಿಗೋಡಿದನು.

ಡೆಲ್ಲಿಗೆ ಹೋಗುವ ರೈಲಿನ ನಿಲ್ದಾಣವನ್ನು ಮಹಮ್ಮದನು ಸೇರುವ ಹೊತ್ತಿಗೂ, ರೈಲು ನಿಲ್ದಾಣವನ್ನು ಬಿಟ್ಟು ಹೋಗುವ ಹೊತ್ತಿಗೂ ಸರಿಹೋಯಿತು. ಮಹಮ್ಮದನ ಕಾಲುಗಳೆರಡೂ ಕುಸಿದುಬಿದ್ದವು. 'ಹಾಯ್-ಖುದಾ! ನನ್ನಮೇಲೆ ದಯೆಬೇಡವೇ.' ಎಂಬೊಂದು ಮೊರೆಯುಮಾತ್ರ ಗಗನವನ್ನು ಭೇದಿಸುವಂತೆ ಮುಟ್ಟಿತು.

೪

ಡೆಲ್ಲಿಯ ಪ್ರವಾಸವನ್ನು ಮುಗಿಸಿಕೊಂಡು 'ಪಾರ್ಸಿ ಕಂಪೆನಿ'ಯು ಕಲ್ಕತ್ತೆಯನ್ನು ಸೇರಿತು. ಪ್ಯಾರಿಯಮೇಲೆ ಆ ವೇಳೆಗೆ ಒಳಗೊಳಗೆ ಕವರುತ್ತಿದ್ದ ಕಿಚ್ಚು ಈಗ ಜ್ವಲಿಸಲಾರಂಭಿಸಿತು. ನಟರ ಅಸಂತೋಷವನ್ನು ಹೇಗಾದರೂ ಸಮಾಧಾನ ಮಾಡಬೇಕೆಂದು ಮಂಡಳಿಯ ವ್ಯವಸ್ಥಾಪಕರು ಆತುರರಾದರು. ಪ್ಯಾರಿಯ, ಉಸ್ಮಾನನ ನಡೆವಳಿಕೆಗಳು ಇಡೀ ಕಲ್ಕತ್ತಾ ನಗರವನ್ನೇ ಆಶ್ಚರ್ಯದಲ್ಲಿ ಮುಳುಗಿಸಲಾರಂಭಿಸಿತು. ಉಸ್ಮಾನನು ಎಂದಿನವರೆಗೆ ಪ್ರೇಕ್ಷಕರನ್ನು ತನ್ನ ಅಮಾನುಷ ಗಾನ ಕೌಶಲ್ಯದಿಂದ ತಣಿಸುತ್ತಿದ್ದನೋ ಅಂದಿನವರೆಗೆ ಅವನ ಹೇಸಿಗೆಯ ನಡತೆಯನ್ನು ಪ್ರೇಕ್ಷಕರು ಮರೆಯುತ್ತಿದ್ದರು. ಆದರೀಗ....ಶಾರೀರದ ಸುಖಸಂಪತ್ತಿ ಕುಗ್ಗಿದಾಗ....ಅಭಿನಯದಲ್ಲಿ ಸ್ಥಿಮಿತವಿಲ್ಲದೆ ಸ್ವೇಚ್ಛಾಪ್ರವರ್ತನೆ ಮೂಡಿದಾಗ....'ಮಾನವೀಯ' ಮರ್ಯಾದೆಯನ್ನೂ ಅತಿಕ್ರಮಿಸಿ ಅವನು ಮಿತಿಮೀರಿ ಸೆರೆಕುಡಿದು ಪ್ಯಾರಿಯ ಹೆಗಲಮೇಲೆ ಕೈಹಾಕಿಕೊಂಡು ಬೀದಿಬೀದಿಗಳಲ್ಲಿ ಮೋಟಾರಿನಲ್ಲಿ ಸುತ್ತಲಾರಂಭಿಸಿದಾಗ....ಅವರ ಅಭಿಮಾನವೂ ಲಯಗತಿಯನ್ನೇ ಅನುಸರಿಸಿತು.

ಮೊದಲು ಯಾವ ಉಸ್ಮಾನ್ ಪ್ಯಾರಿಯವರ ಹೆಸರು ಕಂಪೆನಿಗೆ ಲಕ್ಷಾಂತರ ರೂಪಾಯಿಗಳನ್ನು ಕೊಡಿಸಿತೋ ಈಗ ಅವರ ಹೆಸರುಗಳ ಸಹಾಯದಿಂದ ಕಂಪೆನಿಯ ಖರ್ಚು ಕೂಡಾ ಹುಟ್ಟದಾಯಿತು. ವ್ಯವಸ್ಥಾಪಕರು ಪರಿಸ್ಥಿತಿಯ ಕಠಿಣತೆಯನ್ನು ಗ್ರಹಿಸಿ ನಾಯಕ ನಾಯಕಿಯರಿಬ್ಬರಿಗೂ 'ಕಂಪೆನಿಯನ್ನು ಬಿಡಲು' ಪೂರ್ವಸೂಚನ ಪತ್ರಗಳನ್ನು ಬರೆದರು. ಉಸ್ಮಾನನಿಗೆ ಯೋಚನೆಗೀಗ ಆರಂಭವಾಯಿತು. ಅವನು ಯೋಚಿಸುತ್ತಿರುವಷ್ಟರಲ್ಲಿಯೇ ಪ್ಯಾರಿಯು ತಾನು ಮೊದಲಿದ್ದ ಕಂಪೆನಿಯನ್ನು ಮತ್ತೆ ಹೋಗಿಸೇರಿ ಉಸ್ಮಾನನನ್ನು ಸಂಪೂರ್ಣವಾಗಿ ಮರೆತುಬಿಟ್ಟಳು.

ಉಸ್ಮಾನನ ಕಣ್ಣು ತೆರೆಯಿತು. ತನ್ನ ಸ್ಥಿತಿಗತಿ ಏನಾಯಿತೆಂಬ ಅರಿವವನಿಗೀಗುಂಟಾಯಿತು. ಸಂಪಾದಿಸಿದ್ದ ಸಹಸ್ರಾರು ರೂಪಾಯಿಗಳನ್ನು ನಿರ್ವಂಚನೆಯಿಂದ ಪ್ಯಾರಿಯ ಸುಖಕ್ಕೆ ಸುರಿದಿದ್ದನು. ಇಂದವಳು ಲಕ್ಷಾಧಿಕಾರಿ....ತಾನು ಮೊದಲಿನ ಭಿಕಾರಿ. ಮೊದಲಿನ ತನ್ನ ಶಾರೀರ ಸಂಪತ್ತಿಯನ್ನು ನೀಗಿಕೊಂಡಿದ್ದನು. ದೇಹವು ಮದ್ಯವ್ಯಸನಗಳಲ್ಲಿ ಕ್ಷಯಿಸಿ ನಾದವಿಲ್ಲದ ಬಿದಿರು ಕೊಳವೆಯಂತಾಗಿತ್ತು. ಕಣ್ಣುಗಳು, ಕೆನ್ನೆಗಳು, ಎದೆಯಗೂಡು ಗುಣಿಬಿದ್ದು ಸಂಸ್ಕಾರಕ್ಕೆಸಿದ್ಧವಾಗಿರುವ ಪ್ರೇತಕಳೇಬರದಂತಾಗಿತ್ತು. ಒಳಗಿನ ತಿರುಳಳಿದು ಉಸ್ಮಾನನು ಒಳಗೆ ನಿರಾಶ್ರಯನು........ಹೊರಗಿನ ಸೌಭಾಗ್ಯವನ್ನು ನೀಗಿಕೊಂಡು ಹೊರಗೆ ನಿರಾಶ್ರಯನು!!

ಈ ಆಘಾತವು ಒಂದು ತಪ್ಪಿನಿಂದ ಇನ್ನೊಂದಕ್ಕೆ ಅವನನ್ನೆಳೆದೊಯ್ದಿತು. ಸಣ್ಣಪುಟ್ಟ ಕಂಪೆನಿಗಳನ್ನು ಸೇರಿ, ಸಿಕ್ಕುಸಿಕ್ಕಿದ ಸ್ತ್ರೀಯರ ಸಹವಾಸದಲ್ಲಿ, ಸಿಕ್ಕುಸಿಕ್ಕಿದ ಮದ್ಯಪಾನಗಳನ್ನು ಸೇವಿಸುತ್ತಾ ತನ್ನ 'ಪತನ ಜೀವನ'ದ ಹಾಡನ್ನು ಹಾಡಮುಗಿಸಲೆತ್ನಿಸಿದನು. ಅವನ ಜೀವನವು ನಾವಿಕನನ್ನು ಕಳೆದುಕೊಂಡ ನಾವೆಯು ಚಂಡಮಾರುತನ ಪ್ರಚಂಡಾಗ್ರಹಕ್ಕೆ ಸಿಲುಕಿದಂತಾಗಿತ್ತು. ಇದರ ಪರಿಣಾಮವಾಗಿ ಘೋರ ಶಸ್ತ್ರಚಿಕಿತ್ಸೆಯೊಂದನ್ನವನು ಅನುಭವಿಸಬೇಕಾಯಿತು.

ಶಸ್ತ್ರಚಿಕಿತ್ಸೆಯನ್ನು ತೀರಿಸಿಕೊಂಡು ಉಸ್ಮಾನನು 'ಸಾರ್ವಜನಿಕ ವೈದ್ಯಶಾಲೆ'ಯಿಂದ ಹೊರಬಿದ್ದಿದ್ದಾನೆ. ಅವನ ಹೊರಗಿನ 'ನಿರಾಶ್ರಯತೆ'

ಹೋಗಿಲ್ಲ. ಆದರೆ ಒಳಗಿನ 'ನಿರಾಪ್ರಿಯತೆ'ಯು ಸ್ವಲ್ಪ ಕಡಿಮೆಯಾಗಿದೆ. 'ವೈದ್ಯಶಾಲೆಯಲ್ಲಿ ತನ್ನ ಬಳಿಯಲ್ಲೊಂದು ಹಾಸಿಗೆ. ಕಾಹಿಲೆಗ್ರಸ್ತನೊಬ್ಬ ಕಿರಿಯ ಅವನ 'ತಂದೆಯು ಮತ್ತು ತಾಯಿ'ಯು ಬಂದು ಹತ್ತಿರ ಕುಳಿತು ಮಗನನ್ನು ಆರೈಕೆಮಾಡುತ್ತಿದ್ದ ನೋಟವನ್ನು ನೋಡಿದ. ಅದು ಅವನ ಅಂತಃಕರಣದಲ್ಲಿ ಅಡಗಿದ್ದ ಕೆಲವು ಹಳೆಯ ನೆನಪುಗಳನ್ನು ಜಾಗೃತಗೊಳಿಸಿತು. ಇಂದಿನಿಂದ ಹಿಂದಿನವರೆಗೆ ತನ್ನ ಜೀವನದಲ್ಲಿ ನಡೆದ ಘಟನೆಗಳನ್ನೆಲ್ಲಾ ಒಂದು ಒಂದಾಗಿ ಜ್ಞಾಪಿಸಿಕೊಂಡನು. ತಾನು ಎಂತಹ ಸರಳ, ಸದ್ಗುಣಭರಿತ, ಸುಕುಮಾರನಾಗಿದ್ದೆನೆಂಬುದನ್ನು ಸ್ಮರಿಸಿಕೊಂಡನು ಮತ್ತು ತನ್ನ ತಂದೆಯನ್ನು ನೆನೆದನು. ಅವನ ಕಾರುಣ್ಯ, ತಾಯಿಯಿಲ್ಲದ ಮಗುವೆಂದು ತನ್ನನ್ನು ಸಾಕಿದ ಪ್ರೀತಿಯ ರೀತಿ, ತಾನು ಸ್ವಲ್ಪ ಕೆಲಸಮಾಡಿದರೂ ಬಳಲುವೆನೆಂದು ಬೇಸರವಿಲ್ಲದೆ ಆ ಬೆಳೆದ ವಯಸ್ಸಿನಲ್ಲಿಯೂ ಎಲ್ಲ ಶ್ರಮವನ್ನೂ ತಾನೇ ವಹಿಸುತ್ತಿದ್ದ ಉದಾತ್ತತೆ, ತನ್ನ ಶ್ರೇಯಸ್ಸಿಗಾಗಿ ಸರ್ವವನ್ನೂ ಅರ್ಪಿಸಿದ್ದ ನಿಷ್ಕಾಮ ಪ್ರೇಮ!! ಎಲ್ಲವನ್ನೂ ನೆನೆದು ಮಗುವಿನಂತೆ ಅತ್ತುಬಿಟ್ಟನು. ಮಧ್ಯೆ ಮಧ್ಯೆ ಅವನ ಬಾಯಿಂದ 'ದಾದಾ! ದಾದಾ! ದಾದಾ!' ಎನ್ನುವ ಕಳಕಳಿಯ ನುಡಿಯೊಂದು ಮಾತ್ರ ಬರುತ್ತಿತ್ತು. ದುಃಖದ ಎದುರಿಗೆ ತಾನೆಂತಹ ಹಸುಗೂಸೆಂಬುದನ್ನರಿತನು. ದುಃಖದ ಆವೇಗದಲ್ಲಿ ಅತ್ತು ಅತ್ತು ಅವನ ಕಣ್ಣುಗಳು ಕೆಂಪೇರಿದ್ದರೂ ಹೃದಯವು ಹಗುರವಾಗಿತ್ತು.

ಊರಿಗೆ ಹಿಂದಿರುಗಿ ತಂದೆಯ ಚರಣಧೂಳಿಯನ್ನು ನೆತ್ತಿಯಲ್ಲಿ ಮುಡಿಯಲು ಮನಮಾಡಿದನು. ಆದರೆ ತನ್ನ ಬಗೆಯನ್ನು ನೋಡಿ ನಾಚಿಕೊಂಡನು. 'ಮಗನು ದೊಡ್ಡ ಶ್ರೀಮಂತನಾಗಿರುವನೆಂದು ನಂಬಿರುವ ತಂದೆಗೆ ಈ ಮುಖವನ್ನು ಹೇಗೆ ತೋರಿಸಲಿ' ಎಂದುಕೊಂಡನು. ಆದರೆ....ಅವನು ನನ್ನ ತಂದೆ....ನಾನು ನಿರ್ಗತಿಕ ಶಿಶುವಾಗಿದ್ದಾಗಿನಿಂದ ನನ್ನನ್ನು ಪೊರೆದು ಪೋಷಿಸಿ ಪ್ರೀತಿಸಿದವನು. ಪ್ರೀತಿಗೆ ಸಿರಿಯ ಹೊದಿಕೆಯೇತಕ್ಕೆ? ಎಂದು ಸಮಾಧಾನಪಟ್ಟುಕೊಂಡು ಊರಿಗೆ ಹೊರಟೇಬಿಟ್ಟನು.

೫

ಮಹಮ್ಮದನು ಹೇಗೆ ಊರನ್ನು ಸೇರಿದನೋ ಅವನಿಗೇ ಗೊತ್ತು. ರೈಲಿನಿಂದಿಳಿದೊಡನೆಯೇ ನಿಶ್ಶಕ್ತಿಯಿಂದ ಬಿದ್ದುಬಿಟ್ಟನು. ಮೊದಲೇ ದುಃಖ

ಎಂದ ಜೀರ್ಣವಾಗಿದ್ದ ಅವನ ದೇಹವು ಮಗನನ್ನು ಕಾಣದ ದುಃಖವನ್ನು ತಡೆಯದಾಯಿತು. ಕೆಲವು ದಯಾವಂತರು ಅವನನ್ನು ಹೊತ್ತು ತಂದು 'ಸಾರ್ವಜನಿಕ ಆಸ್ಪತ್ರೆ'ಯಲ್ಲಿ ಹಾಕಿದರು. ಅವನ ವ್ಯವಸಾಯ ಬಂಧುಗಳು ಆಗಾಗ್ಗೆ ಬಂದು ಹತ್ತಿರ ಕುಳಿತು ಸಮಾಧಾನ ಹೇಳುತ್ತಿದ್ದರು. ಮಹಮ್ಮದನ ದೇಹದಲ್ಲುಳಿಯಲು ಒಪ್ಪದ ಆತ್ಮವು ಅದನ್ನು ಬಿಟ್ಟುಹೋಗಲು ಹಿಂಜರಿಯುತ್ತಾ ಅವನನ್ನು ವಿಶೇಷವಾಗಿ ಕಾಡಿಸುತ್ತಿದ್ದಿತು. ಹೃದಯ ಬೇನೆಗೆ ಪ್ರೇಮವೇ ಮದ್ದು. ಚಿಕಿತ್ಸಕರು ನಿರಾಶೆಯಿಂದ ಕೈಕೊಡವಿ ಬಿಟ್ಟರು.

ನಿದ್ದೆಯಲ್ಲಿ, ಸುಷುಪ್ತಿಯಲ್ಲಿ, ಜಾಗೃತಿಯಲ್ಲಿ ಮಹಮ್ಮದನಿಗೊಂದೇ ಧ್ಯಾನ 'ಉಸ್ಮಾನ್ ಮೇರಾ ಬೇಟಾ'....ಇಂತಹ ನೋವಿನಲ್ಲಿ ನಂದುತ್ತಿದ್ದರೂ 'ದಯಾಮಯನಾದ ಖುದಾ'ನನ್ನು ಮಾತ್ರ ಮರೆತಿರಲಿಲ್ಲ. 'ನನ್ನೆಡೆಗೆ ಬಾ-ಬಾರೆಂದು ಕರೆಯುವೆಯಲ್ಲಾ, ಖುದಾ, ಮಗನೆಂಬ ಮೋಹವನ್ನು ಏತಕ್ಕೆ ತಂದಿಟ್ಟೆ' ಎಂದು ಕೇಳುವನು. ಮರುಕ್ಷಣವೇ ತಾನೇ ನಕ್ಕು 'ಮಗನೂ ಖುದಾನೇ ಎಂದು ತೋರಿಸುವುದಕ್ಕಲ್ಲವೇ ?' ಎಂದಂದುಕೊಳ್ಳುವನು.

ಹೃದಯವು ಕೃಶವಾಗಿದೆ ಎಂದೊಬ್ಬರು ವೈದ್ಯರು ಹೇಳಿದರು....ಶ್ವಾಸಕೋಶಗಳು ಕೃಶವಾಗಿವೆ ಎಂದು ಇನ್ನೊಬ್ಬರು ಹೇಳಿದರು. ಅಂತೂ ಎಲ್ಲರೂ ಇದು ಓಡುವ ಕ್ಷಯವೆಂದು ನಿರ್ಧರಿಸಿಬಿಟ್ಟರು. ಔಷಧಿಯನ್ನು ಕುಡಿಸಲು ದಾದಿಯು ಬಂದರೆ ಆಕೆಯ ಕೈಗಳನ್ನು ಹಿಡಿದು 'ಮಗಳೇ, ನನಗೇತಕ್ಕೆ ಈ ಔಷಧ. ಒಮ್ಮೆ ಉಸ್ಮಾನನನ್ನು ಬರಮಾಡು. ಅವನನ್ನು ನೋಡಿ ನಿರಾತಂಕವಾಗಿ ಈ ಯಾತ್ರೆಯನ್ನು ಮುಗಿಸಿಬಿಡುವೆನು' ಎಂದು ಹೇಳಿ ತನ್ನ ದೈನ್ಯ ನೋಟದಿಂದ ಅವಳ ಮನವನ್ನು ಮರುಕದಲ್ಲಿ ಮುಳುಗಿಸಿಬಿಡುವನು.

ಒಂದು ಬೆಳಿಗ್ಗೆ....ಮೋಡ ಮುಸುಕದಿದ್ದರೂ ಆಗಸದಲ್ಲಿ ಹರ್ಷಸೂಚನೆಯಿಲ್ಲ. ಒಂದು ತೆರನ ಗಂಭೀರತೆಯ ಭೀಕರ ಸೌಂದರ್ಯವು ಹಬ್ಬಿದೆ. ಮಹಮ್ಮದನೆದ್ದು ಮುಂಜಾನೆಯ ನಮಾಜಿನಲ್ಲಿ ಮಗ್ನನಾಗಿದ್ದಾನೆ. ಅವನ ಸರಳ ಹೃದಯದಿಂದ ಹೊರಬೀಳುತ್ತಿದ್ದ ಪ್ರಾರ್ಥನೆಯೊಂದಿಗೆ ಬೆರೆತು ಇನ್ನಿಬ್ಬರು ಮೊಣಕಾಲೂರಿ ಎದುರಿಗೆ ಕುಳಿತಿದ್ದಾರೆ. ಮಹಮ್ಮದನ ಮುಖದಲ್ಲಿ ವಿರಾಜ

ಮಾನವಾದ ಪ್ರಭೆಯೊಂದು ಮೂಡಿದೆ. ಅಂತರಂಗದ ಶಾಂತಿಯ ಪ್ರತಿಬಿಂಬವು ಮುಖದಮೇಲೆ ಬಿದ್ದಂತಿದೆ. ಪ್ರಾರ್ಥನೆಯನ್ನು ಮುಗಿಸಿ, ಸೇವಕರ ಸಹಾಯದಿಂದ ಮೆಲ್ಲನೆ ಹಾಸಿಗೆಯಮೇಲೆ ಕುಳಿತು, ಹತ್ತಿರದಲ್ಲಿ ನಿಂತಿದ್ದ ಡಾಕ್ಟರರನ್ನು ಕುರಿತು :—

'ಹಕೀಮ್‌ಜೀ....ಇವತ್ತು ನನ್ನ ಖುದಾ ಹೇಳಿದ್ದಾನೆ ನೋಡಿರಿ.'

'ಏನನ್ನು....ಖಾನ್‌ಸಾಹೇಬರೇ!'

'ನನ್ನ....ನನ್ನ....ಉಸ್ತಾದನನನ್ನು ಕಾಣುವೆನೆಂದು!'

'ನಿಜ....ಖಾನ್‌ಸಾಹೇಬರೇ'

'ನಿಜವೇ ಹಕೀಮ್‌ಜೀ. ನಾನು ಖಂಡಿತವಾಗಿಯೂ ಉಸ್ತಾದನನನ್ನು ಕಾಣುವೆನೇ!'

'ಕಾಣುವಿರಿ ಖಾನ್ ಸಾಹೇಬರೇ....ನಾನೇ ಅವರನ್ನು ಕರೆತಂದು ತೋರಿಸುವೆನು.'

'ಎಲ್ಲ....ಎಲ್ಲ....ಬೇಗ ಕರೆತನ್ನಿರಿ!'

'ತಾವು ಅವಸರಪಡಬಾರದು ಜೀ. ನಾನು ಮಾತಿಗೆ ತಪ್ಪುವವನಲ್ಲ. ಕೊಂಚ ಈ ಚಹಾ ತೆಗೆದುಕೊಳ್ಳಿರಿ. ಅನಂತರ ಅವರನ್ನು ಕರೆತರುವೆನು.'

ಚಹಾ ಪಾತ್ರೆಯನ್ನು ಕೈಗೆ ತೆಗೆದುಕೊಂಡು ಸ್ವಲ್ಪ ಸೇವಿಸಿ, ಹಾಗೆಯೇ ಕೊಡುತ್ತಾ ಕತ್ತೆತ್ತಿ ನೋಡಿದನು. ಎದುರಿಗಿದ್ದವನು ಹಕೀಮನಲ್ಲ.... ಯಾರೋ ಅಪರಿಚಿತ. ಮಹಮ್ಮದನು ಕಣ್ಣುಜ್ಜಿಕೊಳ್ಳುತ್ತಾ ಆ ವ್ಯಕ್ತಿಯನ್ನು ನಿಟ್ಟಿಸಿ ನೋಡಿ

'ನೀನು ಯಾರು?'

'ನಾನು ಯಾರೇ?'

ತನಗೆ ಮಾರುತ್ತರ ಹೇಳಿದ ವ್ಯಕ್ತಿಯ ಹಿಂದಿದ್ದ ತನ್ನ ವ್ಯವಸಾಯ ಬಂಧುವನ್ನು ಗುರುತಿಸಿ, 'ಇವನು ಯಾರೋ ಅವನ ಸ್ನೇಹಿತನಿರಬಹುದು' ಎಂದುಕೊಂಡನು. ಆದರೆ ಕರುಳು ಏನನ್ನೋ ಹೇಳುತ್ತಿದ್ದಿತು.

ಮತ್ತೆ ಆ ಹೊಸಬನು.

'ಖಾನ್ ಸಾಹೇಬ್.'

'ಜೀ'

'ದಾ....ದಾ....'

ಆ ಧ್ವನಿಯ ಗುರುತಾಯಿತು. ದಿಟ್ಟಿಸಿ ನೋಡಿದನು.

'ಬೇಟಾ....ಬಂದೆಯಾ'

ಎಂಬಷ್ಟೇ ಮಾತುಗಳು ಅವನ ಬಾಯಿಂದ ಹೊರಬಿದ್ದದ್ದು. ತಂದೆ ಮಕ್ಕಳು ಗಾಢಾಲಿಂಗನದಲ್ಲಿ ಒಂದಾಗಿದ್ದರು.

ಸ್ವಲ್ಪ ಹೊತ್ತು ಕಳೆಯಿತು. ಉಸ್ಮಾನನ ಜೊತೆಯಲ್ಲಿ ಬಂದಿದ್ದವನು ಇಬ್ಬರನ್ನೂ ಬಿಡಿಸಿ, ಮಹಮ್ಮದನನ್ನು ಹಾಸಿಗೆಯ ಮೇಲೆ ಮಲಗಿಸಿದನು. ಉಸ್ಮಾನನು ತಂದೆಯ ಬಳಿ ಕುಳಿತು ಅವನ ಗಡ್ಡವನ್ನು ಚುಂಬಿಸಿ, ಮುಖವನ್ನು ಮೃದುವಾಗಿ ನೇವರಿಸಿ, ಕಂಬನಿಯನ್ನು ತನ್ನ ಅಂಗಿಯ ಅಂಚಿನಿಂದ ಒರಸಿ

'ದಾದಾ! ಕೊನೆಗೂ ನಿನ್ನನ್ನು ಕಂಡೆನಲ್ಲಾ' ಎಂದಂದನು.

'ಬೇಟಾ! ಬಂದೆಯಾ! ಬಾ! ತಬ್ಬಿಕೊ! ಖುದಾ ನಿನ್ನನ್ನು ಕಾಪಾಡಲಿ! ನನ್ನ ಅಮೀನಾ....ಅವಳು....ಇದ್ದಿದ್ದರೆ....ನಿನ್ನನ್ನು ನೋಡಿ....'

ಎಂದು ಹೇಳುತ್ತಾ ಮಗನನ್ನು ಗಟ್ಟಿಯಾಗಿ ಅಪ್ಪಿದನು. ಸ್ವಲ್ಪ ಹೊತ್ತು ಕಳೆಯಲು ಉಸ್ಮಾನನು ಗಾಬರಿಯಾಗಿ ಎದ್ದು ನೋಡುತ್ತಾನೆ.... ಅದೇ ಸ್ಮಿತ, ಶಾಂತಮಯ ವದನ....ಅದೇ ಸರಳ, ನಿಷ್ಕಾಮ ಪ್ರೇಮದ ಲೀಲಾನಾಟ್ಯ....ಆದರೆ

ಹಕ್ಕಿಯು ಹಾರಿಹೋಗಿತ್ತು.

'ದಾದಾ! ದಾದಾ!! ದಾದಾ!!!' ಎಂದನ್ನುತ್ತಾ ತಂದೆಯ ಮೇಲೆ ಬಿದ್ದನು. ಎಲ್ಲಿಂದಲೋ

'ಬೇಟಾ! ಉಸ್ಮಾನ್! ಖುದಾ!' ಎನ್ನುವ ಪ್ರೀತಿಯ ನುಡಿಗಳ ಮಾರ್ದನಿಯು ಕೇಳಬಂತು.

———o———

# ರಾಮೋತ್ಸವ

——:——

೧

ಆನಂದರಾಯರ ಮನೆಯಲ್ಲಿ ರಾಮೋತ್ಸವದ ಗಲಾಟೆ. ಅವರ ಹೆಸರು ಮೈಸೂರಿನಲ್ಲಿ ಮಾತ್ರವೇ ಅಲ್ಲದೆ ಮದರಾಸು, ಕುಂಭಕೋಣಂ, ತಿರುಚನಾಪಳ್ಳಿ, ತಂಜಾವೂರು ಮೊದಲಾದ ಸ್ಥಳಗಳಲ್ಲಿಯೂ ತುಂಬಾ ಪ್ರಸಿದ್ಧವಾಗಿತ್ತು. 'ತೋಡಿ ರಾಗಾನ ಅವರ ಬಾಯಲ್ಲಿ ಕೇಳಬೇಕು.' ಎಂದೊಬ್ಬರೆಂದರೆ 'ಭೈರವಿ ಅವರ ಹಾಗೆ ಯಾರು ಹಾಡುತ್ತಾರ್ರೀ' ಎಂದೊಬ್ಬರು ವ್ಯಾಜ್ಯಕ್ಕೆ ಬರುವರು. 'ಶ್ರೀರಾಗ'–'ಹಂಸಧ್ವನಿ'–'ಮಧ್ಯಮಾವತಿ'–'ಕಾನಡ' ಗಳಂತೂ ರಾಯರ ಖಾಸಾರಾಗಗಳು. ರಾಯರ ಕುಟುಂಬಕ್ಕೆ ಅವರ 'ಹಿಂದೂಸ್ಥಾನಿ ಕಾಪಿ' ಅಚ್ಚುಮೆಚ್ಚು. ಎಷ್ಟೇ ಕೋಪಬಂದು, ಮೂಗಿಗೆ ಮೆಣಸಿನ ಕಾಯಿ ಉಜ್ಜಿಕೊಂಡಹಾಗೆ ಆಗಿದ್ದರೂ 'ಜಗದುದ್ಧಾರನ ಆಡಿಸಿದಳೆಶೋದಾ' ಕಿವಿಗೆ ಬಿದ್ದಿತೆಂದರೆ ರಾಯರ ಕುಟುಂಬ ಕರಗಿ ನೀರಾಗಿ ಹೋಗುತ್ತಿದ್ದರು. 'ನೀವು ಯಾವಾಗ್ಲೂ ಹೀಗೇಂದ್ರೆ, ಕೋಪಮಾಡಿಕೊಳ್ಳೋದಕ್ಕೂ ಅವಕಾಶ ಕೊಡೋದಿಲ್ಲ' ಎಂಬುದೊಂದು ದೊಡ್ಡ ಅಪಾದನೆ. ಅಂತೂ ಲೋಕದ ಮನಸ್ಸನ್ನರಿತಿದ್ದ ಕಾಳಿದಾಸ ಅಂದಹಾಗೆ ಒಬ್ಬೊಬ್ಬರ ರುಚಿ ಒಂದೊಂದು. ಆದರೆ ರಾಯರ ರುಚಿಯ ಸ್ವರೂಪ, ಆಳ ಒಂದೂ ಗೊತ್ತಾಗುತ್ತಲೇ ಇರಲಿಲ್ಲ. 'ತೋಡಿ'ಮೇಲೆ ಹುಚ್ಚು ಹಿಡಿಯಿತೆಂದರೆ, ಒಂದು ವಾರವಾಗಲೀ, ಹತ್ತು ವಾರವಾಗಲೀ ಅದೇ. 'ಸಿಂಹೇಂದ್ರ ಮಧ್ಯಮ' ಮನಸ್ಸಿಗೆ ಬಂತೂಂದರೆ ಸಂಗೀತ ಶಾಸ್ತ್ರದಲ್ಲಿಯಾಗಲೀ, ಕಲೆಯಲ್ಲಾಗಲೀ ಬೇರೆ ರಾಗಗಳೂ ಇವೆ ಎಂಬುದೇ ಮರೆತುಹೋಗುತ್ತಿದ್ದಿತು. ಹಾಡುವುದಕ್ಕೆ ಮನಸ್ಸು ಬಂದುಬಿಟ್ಟರೆ ಮೈಮೇಲೆ ಪರಿವೆಯೇ ಇರುತ್ತಿರಲಿಲ್ಲ. ತಾವು ಹಾಡುತ್ತಿರುವುದು ಹುಜೂರ್ ಸನ್ನಿಧಾನದ ಎದುರಿಗೇ, ಹೊಟೇಲಿನಲ್ಲಿಯೇ, ಲಲಿತಾದ್ರಿಯ ಮೇಲೇ ಎಂಬುದು ಕೂಡಾ ಮರೆತುಹೋಗುತ್ತಿದ್ದಿತು. ಕೇಳುತ್ತಿದ್ದವರಿಗೂ ಅದೇತೆರನ ಹುಚ್ಚು ಹಿಡಿಯುತ್ತಿತ್ತು. ರಾಗದೇವಿಯೇ ತಮ್ಮೆದುರಿಗಿರುವಳೋ ಎಂಬಂತಹ ಮೋಹದ ಮಾಯೆಯು ಮುಸುಕುತ್ತಿತ್ತು. ಆನಂದರಾಯರ

ಹುಳುಕು ಮುಖದ, ಕೃಷ್ಣವರ್ಣದ ದೊಡ್ಡ ಕಣ್ಣಿನ, ಸ್ಥೂಲದೇಹದ ಬದಲು ಒಬ್ಬ ನವಯೌವನ ಶೋಭಿತೆಯೂ, ಸುಂದರಿಯೂ, ಸ್ನಿಗ್ಧವದನೆಯೂ ಆದೊಬ್ಬ ದೇವಿಯು ಕಂಡುಬರುತ್ತಿದ್ದಳು. ಒಮ್ಮೊಮ್ಮೆ ರಾಯರು ಹಾಡುತ್ತಾ ಹಾಡುತ್ತಾ ಹುಚ್ಚರಂತೆ ಅತ್ತುಬಿಡುವರು, ನಕ್ಕೂ ಬಿಡುವರು; ಒಮ್ಮೊಮ್ಮೆ ಹಾಡುವುದನ್ನು ನಿಲ್ಲಿಸಿ ಅಂಜಲಿಬದ್ಧರಾಗಿ ನಿಂತು 'ಅಮ್ಮಾ, ನಿನ್ನ ಮಗ ನಲ್ಲವೇ ನಾನು. ನನ್ನನ್ನೇಕೆ ಹೀಗೆ ಪರೀಕ್ಷಿಸುವೆ. ಅಸ್ಪಷ್ಟವಾಗಿ ನೀನು ಕೇಳಿಸುತ್ತಿರುವ ಸ್ವರರವ ಸ್ಪಷ್ಟವಾಗಿ ಕೇಳುವಂತೆ ಮಾಡು' ಎಂದು ದೈನ್ಯ ದಿಂದ ಬೇಡಿ, ಕೇಳುತ್ತಿದ್ದವರನ್ನು ಬೆರಗುಮಾಡಿಬಿಡುವರು. ಹಾಡಿಕೆಯಲ್ಲಿ ರಸವಿರಬೇಕು, ಜೀವವಿರಬೇಕು, ಹಾಡುವವನ ಜೀವವು ಹಾಡಿನ ಭಾವ ದಲ್ಲಿ ಸಮರಸವಾಗಬೇಕು, ಎಂಬುದೇ ಅವರ ಪಲ್ಲವಿ. ತಮ್ಮ ಶಿಷ್ಯವರ್ಗಕ್ಕೆ ಒತ್ತಿ ಒತ್ತಿ ಹೇಳುತ್ತಿದ್ದ ವಿಷಯವೂ ಇದೇ. ಕಲೆಗೆ ಹಣದಲ್ಲಿ ಬೆಲೆ ಕಟ್ಟು ವುದೂ, ಜನಮನರಂಜನೆಗೆ ಆತ್ಮಶಕ್ತಿಯನ್ನು ಮರೆಯುವುದೂ ರಾಯರಿಗೆ ವಿಷಫಲಗಳಂತೆ—ಅಂತೇ ಅವರ ಗಾಯನದಲ್ಲಿ ಒಂದು ಅಪೂರ್ವ ಶೋಭೆ ಯಿರುತ್ತಿದ್ದಿತು.

ಇಂದು ರಾಯರ ಪರಮಪ್ರೇಮಶಿಷ್ಯ ರಾಮುವಿನ ಹಾಡುವಿಕೆ. ಬಲ್ಲ, ನುರಿತ, ನುಡಿಜಾಣರ ಪಕ್ಕವಾದ್ಯ. ಕೇಳಲು ಬಂದಿದ್ದವರು, ರಸಿಕವೃಂದದಲ್ಲಿ ಕಲಾಜಗತ್ತಿನಲ್ಲಿ, ಸಾಹಿತ್ಯಸಾಮ್ರಾಜ್ಯದಲ್ಲಿ ಹೆಸರುಗೊಂಡಿದ್ದ ಅರಿವುಳ್ಳ ಶಾರದಾ ಭಕ್ತರು. ಹಾಡುವವನಿಗೆ ಹೆಮ್ಮೆಯಿಲ್ಲದಿದ್ದೀತೇ? ಗುರುವಿಗೆ ಹೆಮ್ಮೆ ಯಿಲ್ಲದಿದ್ದೀತೇ?-ಕೇಳಲು ಬಂದಿದ್ದವರು ಹೆಮ್ಮೆ ಪಡದಿದ್ದಾರೆ?- ಎಲ್ಲಕ್ಕೂ ಹಿರಿದಾಗಿ, ತಬ್ಬಲಿಯೆಂದು ತಾವು ಸಾಕಿ, ಸಲಹಿ, ಹಗಲಿರುಳು ಅವನ ಶ್ರೇಯವನ್ನೇ ಕೋರುತ್ತಿದ್ದ ಗುರುಪತ್ನಿಯ ಹೆಮ್ಮೆಗೆ—ಹೃದಯದ ಹಿಗ್ಗಿಗೆ ಮಿತಿಯುಂಟೇ?

ಈ ವರುಷದಷ್ಟು ಜನಸಂದಣಿಯು ಹಿಂದೆಯೆಂದೂ ಸೇರಿರಲಿಲ್ಲ. ಆನಂದರಾಯರು ತಮಗೆ ಸರಿತೂಗುವಂತಹ ಶಿಷ್ಯನನ್ನು ಸಿದ್ಧಗೊಳಿಸು ತ್ತಿದ್ದುದು ಜನತೆಗೆ ತಿಳಿದಿತ್ತು—ಇಂದೇ ಅವನ ಹಾಡಿಕೆ—ಮೊದಲನೆಯ ಹಾಡಿಕೆ-ಬಣ್ಣದ ಗಟ್ಟಿತನವು ಬಯಲಿಗೆ ಬರುವಂತಹ ದಿನ. ರಾಯರಂತೂ ಉತ್ಸವದ ಉತ್ಸಾಹದಲ್ಲಿ ತಲ್ಲೀನರಾಗಿ ಹೋಗಿದ್ದರು. ಮನಸ್ಸಿನಲ್ಲಿ, ಶಿಷ್ಯನು

ವಿಜಯಶಾಲಿಯಾಗಿ ಬರಲೆಂಬ ಪ್ರಾರ್ಥನೆ. ಮುಖವಲ್ಲ, ಲಲಿತವಾದ ಪವಿತ್ರ ವಾದ ಆನಂದದ ರಸನೃತ್ಯ.

ಗಣಪತಿಯ ಸ್ತುತಿಯಾಯಿತು. ಇಷ್ಟದೇವತಾ ಪ್ರಾರ್ಥನೆಯೂ ಮುಗಿಯಿತು. ರಾಮುವು ಕುಳಿತಿದ್ದೆಡೆಯಿಂದಲೇ ಗುರುವಿಗೊಮ್ಮೆ, ಗುರು ಪತ್ನಿಗೊಮ್ಮೆ ನಮಿಸಿ 'ಷಡಾನನ ಶಿಖಿವಾಹನ' ಕೀರ್ತನೆಯನ್ನು ಹಾಡಲು ಮೊದಲಿಟ್ಟ. ಅನಂತರ ವರ್ಣಗಳ ಪರಂಪರೆ, ಮಧ್ಯೆ ಮಧ್ಯೆ ಒಂದೊಂದು ಕೀರ್ತನೆ. ಎಲ್ಲವುಗಳಲ್ಲಿಯೂ ಒಂದೇ ಸತ್ವ. ಒಂದೇ ತೆರನ ಪ್ರತಿಭೆ. ಇಂತಹ ಹಾಡಿಕೆಯನ್ನು ಕಲಿಸುವುದಕ್ಕೆ ಸಾಧ್ಯವೇ ಎಂದು ಶಂಕಿಸುವಷ್ಟು ಪ್ರೌಢತರ!! ಹೃದಯಾಂತರಾಳದಲ್ಲಿ ನೆಲಸಿ, ತಾನು ನಲಿಯುತ್ತಾ, ಹಾಡು ಗಾರನ ಹೃದಯ ತಂತಿಗಳನ್ನೇ ವೀಣೆಗುಪಯೋಗಿಸಿಕೊಂಡು ಹಾಡುತ್ತಿದ್ದ ವಾಗ್ದೇವಿಯ ಕಲಾವಿದಗ್ಧತೆಯೇ ಅಲ್ಲಿ ತೆರೆಯನ್ನು ಹರಿದ ನೋಟದಂತೆ ಕಂಡುಬರುತ್ತಿದ್ದಿತು. ಜಗತ್ತಿನ ಸುಖದುಃಖಗಳೆಲ್ಲವೂ ತನ್ನಲ್ಲಿಯೇ ಅಡಕ ಹೊಂದಿನೆಯೋ ಎಂದು ತೋರುತ್ತಿದ್ದ ಆ ಅಂತಃಕರಣಪೂರ್ವಕ ಗಾಯನವು ಶ್ರಾವಕರನ್ನು ತುಸುವೇಳೆಯಲ್ಲಿಯೇ ಮುಗ್ಧತೆಯ ಮಡಲಿನಲ್ಲಿ ಹಾಕಿತು. ಬೆಳೆಯುತ್ತಿದ್ದ ಆ ಮೊಳಕೆಯಲ್ಲಿ ಎಂತಹ ಫಲವಿದೆಯೆಂಬುದನ್ನು ಶ್ರಾವಕರು ಗ್ರಹಿಸಿದರು. ಒಂದು ಗಂಟೆಯಷ್ಟು ವೇಳೆ ಹಾಡಿದ್ದಾಗಿತ್ತು. ಬೇಸರವಿಲ್ಲ, ಮುಖದಲ್ಲಿ ಆಯಾಸದ ಕಳೆಯಿಲ್ಲ—ಒಂದು ದೇದೀಪ್ಯಮಾನವಾದ ಕಾಂತಿ; ನಕ್ಷತ್ರಸಾದೃಶ್ಯವಾದಂತಹ ಕಂಗಳ ಅಪೂರ್ವ ಶೋಭೆ. ಇವುಗಳು ಹೊನ್ನಿನ ಹೊಂಬಣ್ಣಕ್ಕೆ ಮೆರುಗು ಕೊಟ್ಟಂತಿದ್ದುವು. ರಾಮುವು 'ಭೈರವಿ'ಯ ಆಲಾ ಪನೆ ಮುಗಿಸಿ, ಅದೇ ರಾಗದ 'ರಘುವರ ಸುಗುಣಾಲಯ' ಕೀರ್ತನೆಯನ್ನು ಹಾಡಲು ಮೊದಲು ಮಾಡಿದ. ಎದುರಿಗಿದ್ದ ಆನಂದರಾಯರು ಅತ್ತಿತ್ತ ನೋಡಿ, ಸದ್ದಾಗದಂತೆ ಎದ್ದು ಹೊರಟುಹೋದರು. ಶ್ರಾವಕರಲ್ಲಿ ಕೆಲವರು ಕುತೂಹಲದಿಂದತ್ತ ತಿರುಗಿದರು, ಮತ್ತೆ ರಾಮುವಿನ ವಿದ್ಯುತ್ತಾಕರ್ಷಣವು ಅವರ ಗಮನವನ್ನು ಅವನ ಕಡೆಗೆ ತಿರುಗಿಸಿತು.

೨

ಆನಂದರಾಯರೆದ್ದು ಬಂದುದು ತಮ್ಮ ಕಿರುಕೋಣೆಗೆ. ಮನಗೊಪ್ಪುವ ಕೋಣೆ. ಶ್ರೀಮಂತರ ಭೋಗ, ವಿಲಾಸಗಳೆಲ್ಲಿಂದ ಬರಬೇಕು? ಶುಭ್ರತೆಯೇ

ಒಬ್ಬ ಮುದಿಗಣಿಕೆಯು ೧೨-೧೩ ವರುಷದ ಹುಡುಗಿಯೊಬ್ಬಳ ಕೈಹಿಡಿದು ಒಳಕ್ಕೆ ಬಂದು ಅಡ್ಡಬಿದ್ದು, ಹುಡುಗಿಯನ್ನೂ ಅಡ್ಡಬೀಳಿಸಿ:—

‘ಈ ಮಗಾನ ತಪ್ಪು ಅನ್ನೋಬೇಕು ಬುದ್ಧಿ. ದಿಕ್ಕಿಲ್ಲ ಪರದೇಸಿ. ಹೊಟ್ಟೆಗೆ ಹಾಕ್ಕೊಂಡು ಮುಂದಕ್ತರೋ ಭಾರ ತಮ್ದು. ತಾವು ಪುಣ್ಯವಂತ ಮಾರಾಯ್ರು. ನಮ್ಮ ಹಾಗೆ ನಿಮ್ಮ ಹೆಸ್ರು ಹೇಳ್ಕೊಂಡು ಬದ್ಕೋದು ಎಷ್ಟೊ ಮಂದಿ ಅವ್ರೆ. ದೊಡ್ಡ್ಮನಸ್ಮಾಡಿ ಕಾಪಾಡ್ಬೇಕು……’

ಆನಂದರಾಯರು ಕಾಪಾಡುವುದರ್ಥ ಕೇಳಿದಾಗ, ಆ ಹುಡುಗಿಯನ್ನು ತಾವು ಶಿಷ್ಯಳಾಗಿ ಸ್ವೀಕರಿಸಬೇಕೆಂಬುದು ಮನವರಿಕೆಯಾಯಿತು. ಆನಂದರಾಯರಿಗಿದ್ದ ಶಿಷ್ಯರು ಸಂಖ್ಯೆಯಲ್ಲಿ ಬಹಳ ಸ್ವಲ್ಪ. ರಾಯರು ಶಿಷ್ಯರನ್ನು ಸ್ವೀಕರಿಸಬೇಕಾದರೆ ಮಾಡುತ್ತಿದ್ದಷ್ಟು ಜಿಜ್ಞಾಸೆ ಮತ್ತಾವಾಗಲೂ ಮಾಡುತ್ತಿರಲಿಲ್ಲ. ಶಿಷ್ಯನಾಗುವವನ ಮನಸ್ಸಿನ ದಾರ್ಢ್ಯವನ್ನು ಚೆನ್ನಾಗಿ ಪರೀಕ್ಷಿಸಿ ತಿಳಿದುಕೊಂಡನಂತರವೇ ಅವರು ಒಪ್ಪುತ್ತಿದ್ದರು. ಆ ಮೇಲೂ ಕಟ್ಟು ಕಟ್ಟಳೆಗಳು—‘ವಿದ್ಯಾಸ ದುರುಪಯೋಗ ಮಾಡಕೂಡದು—ಕುಡುಮೋರ ಎದುರಿಗೆ ಹಾಡಕೂಡದು—ನಾಟಕಕ್ಕೆ ಸೇರಕೂಡದು’ ಹೀಗೇ ನೂರಾರು. ಅವರು ಸಾಮಾನ್ಯವಾಗಿ ಹೆಂಗಸರಿಗೆ ವಿದ್ಯೆಯನ್ನು ಕಲಿಸಿಕೊಡುತ್ತಿರಲಿಲ್ಲ. ‘ಹೆಣ್ಣು ಮಕ್ಕಳ ಸಂಗೀತ….ಗಂಡಂಗೆ ಮಾಲೆ ಹಾಕೋ ವರೆಗೆ’ ಎಂದು ಮೂದಲಿಸುತ್ತಿದ್ದರು. ವೇಶ್ಯೆಯರಿಗಂತೂ ಇಲ್ಲವೇ ಇಲ್ಲ. ‘ನಿಮಗೆ ವಿದ್ಯೆ ಕಲಿಸಿಕೊಡೋರೂ ಬೇರೆ ಇದ್ದಾರೆ. ಅವರಲ್ಲಿಗೆ ಹೋಗಿ’ ಎಂದನ್ನುತ್ತಿದ್ದರು.

ತಮ್ಮ ಗುಣವನ್ನು ತಿಳಿದೂ ತಿಳಿದೂ ತಮ್ಮಲ್ಲಿಗೆ ಬಂದಿದ್ದ ವೇಶ್ಯೆಯ ದಿಟ್ಟತನವನ್ನು ನೋಡಿ ಕುಪಿತರಾದರು. ತಾವು ಕಲಿತ ವಿದ್ಯೆಯಿಂದ ನೀಚರ ಮನವೊಲಿಸಿ ಹಣವನ್ನು ಕೀಳುವ ಸೂಳೆಗೆ, ತನ್ನನ್ನು ತಾನು ಮಾರಿಕೊಳ್ಳುವ ಕುಲಟೆಗೆ ವಿದ್ಯೆ ಕಲಿಸಿಕೊಡುವುದೇ ಎನಿಸಿತು. ಆದರೂ ಆ ಮಗುವಿನ ಆಕರ್ಷಣೆ, ಜಿಲೆವಣ್ಣಿನ ಕಂದನೇ ಎಂದು ಸಂದೇಹಪಡುವಷ್ಟು ಸರಳವಾದ ನಿಷ್ಕಾಪಟ್ಯ….ಪಾವನನ ಮನೆಗೊಪ್ಪುವ ಮಂಗಳಮೂರ್ತಿಗೆ ಸರಿಯೆನಿಸುವಂತಹ ನಿರ್ಮಲ ತೇಜಸ್ಸು….ಇವುಗಳ ಮಧ್ಯೆ ಸಿಲುಕಿದ ರಾಯರ ಮನಸ್ಸು ಆಂದೋಲನಕ್ಕೀಡಾಯಿತು. ನಿರುಪಾಯರಾಗಿ ಹುಡುಗಿಯನ್ನು ಹತ್ತಿರಕ್ಕೆ ಕರೆದು, ಮೃದುವಾಗಿ ನೇವರಿಸುತ್ತಾ:—

'ನಿನ್ನ ಹೆಸರೇನು ಮಗೂ.'

'ಸುಂದರಾ.'

'ನನ್ನಲ್ಲಿ ಹಾಡೋದನ್ನು ಕಲಿಯಲಿಕ್ಕೆ ಬಂದಿದ್ದೀಯಾ?'

'ಹೌದು.'

'ನನ್ನ ಹತ್ತಿರವೇ ಯಾಕೆ ಕಲ್ತುಕೋ ಬೇಕು?'

'ನಿಮ್ಮ ಹಾಗೆ ಹಾಡೋದಿಕ್ಕೋಸ್ಕರ.'

'ಅಂದರೆ........'

'ಅಂದರೆ........ಎಲ್ಲಾರ್ಕಣ್ಣಲ್ಲೂ ನೀರು ಬರೋ ಹಾಗೆ ಚೆನ್ನಾಗಿ ಹಾಡುತ್ತೀರಲ್ಲಾ ಹಾಗೆ.'

'ಎಲ್ಲಾರನ್ನೂ ಅಳಿಸಿದ್ರೆ ದುಡ್ಡು ಯಾರು ಕೊಡ್ತಾರಮ್ಮಾ. ಚೆನ್ನಾಗಿ ಬಟ್ಟೆ ಹಾಕ್ಕೊಂಡು, ಬಣ್ಣ ಬಳಿದ್ಕೊಂಡು, ಥಕಥೈಯ್ಯಾಂತ ಕುಣಿಯೋದ್ನ ಕಲ್ತುಕೋಬೇಕು. ತುಂಬಾ ಜಾವಡಿಗಳ್ನ ಕಲ್ತುಕೋ ಸಾಕು—ನಮ್ಮ ಸಂಗೀತ ಯಾತಕ್ಕೆ?' ಎಂದು ಬಿರುಸು ನುಡಿದಾಗ ಏನೂ ಅರಿಯದ ಆ ಬಾಲಿಕೆಯು ಮನನೊಂದು, ಕಣ್ಣೀರ್ಗರೆದುದು ನೆನಪಾಯಿತು. 'ಸುಮ್ಮ ಸುಮ್ಮನೆ ಎಳೆ ಕರುಳನ್ನು ನೋಯಿಸಿದೆನಲ್ಲಾ' ಎಂಬ ವಿಷಾದವೂ ಆಯಿತು. ರಾಯರು ಕರುಣೆಯನ್ನು ತಾಳಿ:—

'ಯಾಕಮ್ಮಾ ಅಳುತ್ತೀ?'

'ನೀವೇ ಹೀಗೆಂದಮೇಲೆ ಇನ್ನೇನು ಗುರುಗಳೇ!'

'ಗುರುಗಳೇ' ಎಂಬ ಪದವೊಂದು ರಾಯರ ಚಿತ್ತವನ್ನು ಬದಲು ಮಾಡಿ ಬಿಟ್ಟಿತು.

'ನಾನು ಹೇಳಿದ್ದು ಸುಳ್ಳೇನಮ್ಮಾ.'

'ಇರಬಹುದು ಗುರುಗಳೇ—ಆದರೆ ಎಲ್ಲಾರೂ ಹಾಗೇನೇ? ನಿಮ್ಮ ಆಶೀರ್ವಾದದಿಂದ ನಾನು ಬೇರೆ ರೀತಿ ಆಗಬಹುದು.'

'ಹಾಗಾದರೆ ವಿದ್ಯೆ ಕಲಿತು ಏನುಮಾಡಬೇಕೊಂತಿದ್ದೀ?'

'ಮದುವೆಯಾಗ್ತಾಳಂತೆ ಬುದ್ಧಿ.'

ಬಾಲಿಕೆಯು ನಾಚಿಕೆಯಿಂದ ತಲೆಬಾಗಿದಳು. ತಾಯಿಯ ಕಡೆ ತಿರುಗಿ ಮುಗುಳ್ನಗೆ ಬೀರುತ್ತಾ, ಹುಸಿಮುನಿಸನ್ನು ತೋರಿದಳು. ಪ್ರಿಯಂವದೆಯ ಪ್ರಿಯನುಡಿಗೆ ಮುನಿದ ಶಾಕುಂತಳೆಯ ಕೋಪದಂತಹ ಕೋಪ.

ರಾಯರು ತುಸುಹೊತ್ತು ಚಿಂತಿಸಿ ಆಗಲೆಂದು ಒಪ್ಪಿದರು. ಬಾಲಿಕೆಯು ಹೋಗುವುದಕ್ಕೆ ಮುಂಚೆ ತನ್ನ ಮುಂದಿನ ಗುರುದೇವನಿಗೆ ಮತ್ತೊಮ್ಮೆ ಮಣಿದು, ತಾಯಿಯನ್ನು ಬಿಟ್ಟು ತೆರಳುವ ಮಗುವಿನ ಹಾಗೆ ಅತ್ತಲೇ ನೋಡುತ್ತಾ ನೋಡುತ್ತಾ ಹೋದ ದೃಶ್ಯವು ರಾಯರ ಸ್ಮೃತಿಪಥಕ್ಕೆ ಬಂದಿತು.

ಹುಡುಗಿಯು ಬೆಳೆದಳು. ವಯಸ್ಸು, ವಿದ್ಯೆ, ರೂಪುಗಳೆಲ್ಲದರಲ್ಲಿಯೂ ಪ್ರೌಢೆಯಾದಳು. ಇಪ್ಪತ್ತು ವರ್ಷದ ತುಂಬುತಾರುಣ್ಯ. ಗುರುವನ್ನು ಕೂಡ ಮುಗ್ಧಗೊಳಿಸುವಂತಹ ವಿದ್ವತ್. ರಾಯರು ಶಿಷ್ಯಳ ಬೆಳವಣಿಗೆಯನ್ನು ನೋಡುತ್ತಾ ತಮ್ಮ ಭುಜವನ್ನು ತಾವೇ ತಟ್ಟಿಕೊಳ್ಳುತ್ತಿದ್ದರು. ವ್ಯಾಸಂಗವು ಮುಗಿಯುತ್ತಾ ಬಂದಿತು. ಇಂದು ಸುಂದರಿಯು ಗುರುವಿನ ಬಳಿ ವಿದ್ಯಾದೀಕ್ಷೆಯನ್ನು ಬೇಡಬಂದಿರುವ ಕುಮಾರಿಯಲ್ಲ, ಸ್ತ್ರೀತ್ವದ ಸಂಪೂರ್ಣ ಕಳೆಯನ್ನು ಕಂಡುಕೊಂಡಿದ್ದ ಮನಮೋಹನೆ. ಸುಂದರಿಯ ವಿದ್ಯಾಸಂಪತ್ತಿಯು ಹೆಚ್ಚುತ್ತಾ ಬಂದಿದ್ದಂತೆ, ರಾಯರ ಅನುರಾಗ ಸಂಪತ್ತಿಯು ಹೆಚ್ಚುತ್ತಾ ಬಂದಿತ್ತು. ಶಿಷ್ಯಳನ್ನು 'ಕಲಾಮೂರ್ತಿ'ಯನ್ನಾಗಿಸಬೇಕೆಂದು ಹೊರಟಿದ್ದ ಅವರ ಸಂಕಲ್ಪವು ಈಡೇರಿತ್ತು. ತಾವು ಅವಳ ಜೀವನದಲ್ಲಿ ಪ್ರವೇಶಿಸದಿದ್ದರೆ, ಸುಂದರಿಯೆಲ್ಲಿರುತ್ತಿದ್ದಳೆಂಬ ನೆನಹು ರಾಯರಿಗೆ ಹತ್ತು ಭುಜಗಳನ್ನಾದರೂ ಹೆಚ್ಚಿಗೆ ಕೊಡುತ್ತಿದ್ದಿತು; ಸುಂದರಿಯೂ ಆ ವಿಷಯವನ್ನು ಮರೆತಿರಲಿಲ್ಲ. ರಾಯರ ಅನುರಾಗವು ರೂಪ ವ್ಯತ್ಯಾಸ ಹೊಂದುತ್ತಾ ಬಂದಿತ್ತು. ಇಂದವಳನ್ನು ನೋಡಿದರೆ ತಾವು ಕಾಪಿಟ್ಟು ಬೆಳೆಸಿದ ಮಗಳನ್ನು ಕಂಡಂತಾಗುತ್ತಿರಲಿಲ್ಲ. ಮೋಹವನ್ನು ಹುಟ್ಟಿಸುವ ಒಬ್ಬ ಸುಂದರ ಸ್ತ್ರೀಯನ್ನು ಕಂಡಂತಾಗುತ್ತಿತು.

ಸುಂದರಿಗೆ ಒಂದು ಆಸೆ....ಮಹತ್ತಾದ ಆಸೆ. ಗುರುವಿಗೊಪ್ಪುವ ಕಾಣಿಕೆಯನ್ನು ಕೊಡಬೇಕೆನ್ನುವುದು. ತನ್ನ ಊಹಾಸಾಮರ್ಥ್ಯವು ಚಾಚುವಷ್ಟು ದೂರವೂ ಆಲೋಚಿಸಿದ್ದಾಯಿತು....ಬಗೆ ಹರಿಯದು. ಏಕಲವ್ಯನನ್ನು

ದ್ರೋಣರು ಹೆಬ್ಬೆರಳು ಕೇಳಿದಂತೆ ಸುಂದರಿಯನ್ನು ರಾಯರು ನಾಲಿಗೆಯನ್ನು ಕೇಳಿದ್ದರೆ ಅವಳು ಇಲ್ಲವೆನ್ನುತ್ತಿರಲಿಲ್ಲ. 'ಅವರನ್ನೇ ಕೇಳಿ ಬಿಡೋಣವೇ' ಎಂದೆಂದುಕೊಳ್ಳುವಳು.—ಮರುಕ್ಷಣವೇ 'ಛೆ! ಛೆ! ಉಂಟೇ. ಅವರು ಹೇಳುವುದೂ ಇಲ್ಲ. ಹೇಳಿದರೆ ಸ್ವಾರಸ್ಯವೂ ಇಲ್ಲ. ಅವರಿಗೆ ಆಶ್ಚರ್ಯವಾಗಬೇಕು. ಅಂತಹ ಕಾಣಿಕೆಯನ್ನು ಕೊಡಬೇಕು' ಎಂದುಕೊಂಡು ಬಗೆಹರಿಯದೆ, ಬೇಸತ್ತು ಸುಮ್ಮನಾಗಿಬಿಡುವಳು.

ಶುಕ್ಲಪಕ್ಷದ ಬಿದಿಗೆಯ ರಾತ್ರಿ. ಅಮೃತಕಿರಣನ ಪ್ರಶಾಂತವಾದ ವೈಭವ. ವಸಂತಕಾಲ. ನಳನಳಿಸುತ್ತಿದ್ದ ಎಳೆತಳಿರುಗಳನ್ನಲಂಕರಿಸಿದ್ದ ಹೂಗಳ ಅರೆ ಅರಳುವಿಕೆಯ ಚಂದ. ಮದನ, ರತಿ, ವಸಂತರ ಚೈತ್ರಯಾತ್ರೆಯ ದಿನವೆಂಬಂತಿದ್ದಿತು. ನಡುರಾತ್ರಿ. ವಾತಾವರಣವೆಲ್ಲಾ ಸುನದುಮಯ. ಬೀಸುತ್ತಿದ್ದ ಮಂದಾನಿಲನೊಂದಿಗೆ ಬೆರೆತಿದ್ದ ಲಲಿತ ಮಧುರಗಾನ. ಅದೇ ಕೊನೆಯ ರಾತ್ರಿ....ಸುಂದರಿಯ ಸಾಧನದ ಕೊನೆ ಇರುಳು....ಸುಂದರಿಯು ಭೂಪಾಳಿಯಿಂದ ಭೈರವಿಗೆ ಹೋಗಿದ್ದಳು. ಅದೇ ಭೈರವಿ....ಅವಳ ಅಚ್ಚುಮೆಚ್ಚಿನ ಭೈರವಿ....'ರಘುವರ ಸುಗುಣಾಲಯ'....ಹಾಡಿಕೆಯು ಮುಗಿಯಿತು. ಮಂಗಳವನ್ನು ಹಾಡಿದ್ದೂ ಆಯಿತು. ರಾಯರು ಶಿಷ್ಯಳ ಕೈಹಿಡಿದು-

'ಸುಂದರಾ, ಇಂದು ನಿನ್ನ ಪಾಠ ಮುಗಿಯಿತು. ನಾಳೆಯಿಂದ ನೀನು ಸ್ವತಂತ್ರಳು. ರಾಗದೇವಿ ನಿನಗೆ ಒಲಿದಿರುವಳು.'

'ಎಲ್ಲವೂ ತಮ್ಮ ಅನುಗ್ರಹ. ನನ್ನನ್ನು....ವೇಶ್ಯೆಯ ಮಗಳನ್ನು....ಶಾರದಾದೇವಿಯ ಮಡಿಲಲ್ಲಿ ಹಾಕಿದಿರಿ.'

'ಹೌದು, ಆದರೆ ಗುರುದಕ್ಷಿಣೆ ಕೊಟ್ಟ ಹೊರತು ವಿದ್ಯೆಯು ಸಾರ್ಥಕವಿಲ್ಲ ಬಲ್ಲೆಯಾ. ಇಷ್ಟು ದಿವಸವೂ ಆದದ್ದು ಸಾಧನ-ನಿಜವಾದ ಸಿದ್ಧಿ ಗುರುದಕ್ಷಿಣೆ ಕೊಟ್ಟಮೇಲೆ.'

'ತಮಗೆ ಯಾವ ದಕ್ಷಿಣೆಯನ್ನು ಕೊಡಲಿ ಗುರುವೇ? ತಾವೇ ಹೇಳಿ.'

ರಾಯರು ಕಾಯುತ್ತಿದ್ದದ್ದೂ ಆ ಕೊನೆಯ ಮಾತನ್ನೇ. ಹೇಳಬೇಕೆಂದಾಸೆ-ಆತುರ-ಉದ್ವೇಗ—ಆದರೆ ಬಾಯಲ್ಲಿ ಮಾತು ಹೊರಡದು. ಪ್ರಯತ್ನಿಸಿ ಪ್ರಯತ್ನಿಸಿ:—

'ಸುಂದರಾ ಬೇರೆ ಭಾಷಿಸಬೇಡ. ನನಗೆ.......ನನಗೆ—ಬೇಕಾದ್ದು ಪ್ರೇಮ....ನಿನ್ನ ಅನುರಾಗ.'

ಸುಂದರಿಯು ಬೆಕ್ಕಸಬೆರಗಾದಳು. ತನ್ನ ಕಿವಿಯನ್ನು ತಾನೇ ನಂಬಲಾರದಾದಳು. ದೈವಾಂಶಸಂಭೂತನಾದ ತನ್ನ ಗುರುವಿನ ನುಡಿಯು ಇವನದೇ ಎಂದು ನಂಬಲಾರದಾದಳು. ಆದರದು ಇವನದೇ-ತನ್ನ ಗುರುವಿನದು-ರಾಯರದು. 'ಏನು! ಗುರುದೇವನು ಕೋರುವುದು ತನ್ನ ದೇಹವನ್ನೇ.......ಅರಸರ ಅರಸಾಗಿರುವವನು ತಿರುಕನ ಎಂಜಲಿಗೆ ಕೈನೀಡುವನೇ?' ಎಂಬ ಸಂದೇಹ! ಕಣ್ಣುಬಿಟ್ಟು ನೋಡಿದರೆ, ತನ್ನ ರೂಪರಾಶಿಯನ್ನು ರಕ್ತತುಂಬಿದ ಕಣ್ಣುಗಳಿಂದ ನೋಡುತ್ತಾ, ಜೋಲುಬಿದ್ದ ತುಟಿಯಮೇಲೆ ಬಿಸಿಯುಸುರನ್ನು ಬಿಡುತ್ತಾ ಕುಳಿತಿದ್ದ ಕಲೆಯ ದೆವ್ವ........ ಕಣ್ಣುಜ್ಜಿಕೊಂಡು ನೋಡುತ್ತಾಳೆ—ಎದುರಿಗೆ ತನ್ನ ವಿದ್ಯಾಗುರು—ಆನಂದರಾಯರು.

ಸುಂದರಿಯು ಧೈರ್ಯಮಾಡಿಕೊಂಡು—

'ಗುರುವೇ.....ನಾನು.....ನಿಮ್ಮ ಶಿಷ್ಯಳು.....ನಿಮ್ಮ ಮಗಳು' ಎಂದು ಮಾತ್ರ ಆಡಿದಳು. ರಾಯರಿಗೆ ಸ್ಮೃತಿ ತಪ್ಪುವಂತಾಯಿತು. ತನ್ನಿಂದ ಉದ್ಧಾರ ಹೊಂದಿದ ಸೂಳೆಗೆ ಈ ಉದ್ಧಟತನವೇ ?....ಈ ಅಹಂಕಾರವೇ.... ತನ್ನ ಕೋರಿಕೆಯನ್ನು ನೆರವೇರಿಸಲಾಗದಂತಹ ಸೊಕ್ಕೇ ?....ರಾಯರ ಕಲಾವಿದಗ್ಧತೆಯ ಕೋಮಲತೆಯು ಎಲ್ಲಿಗೋ ಮಾಯವಾಗಿ ಬಿಟ್ಟಿತು....ಅಲ್ಲಿ ಆಗ ಇದ್ದುದು ಪುರುಷನ ಕಾಠಿಣ್ಯ-ಮೃಗತೃಷ್ಣಾ-ಅಂಧಪಿಪಾಸೆ. ಬಲಾತ್ಕಾರದಿಂದ ಬರಸೆಳೆದು ತಮ್ಮ ತೋಳಸೆರೆಯಲ್ಲಿ ಅವಳನ್ನು ಹಾಕಿದರು...................

ಈ ಚಿತ್ರವು ನೆನಪಾಯಿತು.

ರಾಯರ ಕಣ್ಣಿಂದ ದುಃಖದ ಕಿರಿತನದಲ್ಲಿ ಬರುತ್ತಿದ್ದ ಹನಿಸರಣಿಯೂ ನಿಂತುಹೋಯಿತು. ಮುಂದಿನ ಚರಿತ್ರೆಯ ನೆನಪು ಹೃದಯವನ್ನು ಹಿಂಡಿಬಿಟ್ಟಿತು. ಸುಂದರಿಯು ಎರಡೇವರ್ಷ ಬದುಕಿದ್ದುದು—ರಾಮುವಿಗೆ ಜನನವಿತ್ತುದು-ದುಃಖದಿಂದ, ನಿರಾಸೆಯಿಂದ ಕ್ಷಯಿಸಿ ಕ್ಷಯಿಸಿ ಮೃತ್ಯುವಶವಾದದ್ದು ಒಂದಾಗುತ್ತಲೊಂದು ಸೇಡನ್ನು ತೀರಿಸಿಕೊಳ್ಳುವಂತೆ ಬರಲಾರಂಭಿಸಿದವು.

## ೪

ಆ ವೇಳೆಗೆ ರಾಮುವಿನ ಕಛೇರಿ ಕೊನೆಗಂಡಿತ್ತು. ಮಂಗಳಾರತಿಯ ಸಮಯ. ಸುಖದಿಂದ ತಣಿದಿದ್ದ ಶ್ರಾವಕರು ಸಮ್ಮೋಹನಾಸ್ತ್ರದಿಂದ ಬಂಧಿತರಾಗಿದ್ದಂತಿದ್ದಿತು. ರಾಯರನ್ನು ಹುಡುಕುತ್ತಾ ಅವರ ಕೆಲವು ಗೆಳೆಯರು ಕೋಣೆಗೆ ಬಂದರು. ರಾಯರ ಚಿತ್ತಸ್ಥಿತಿಯನ್ನು ನೋಡಿ ಆನಂದದ ತಲ್ಲೀನತೆಯೆಂದು ಭಾವಿಸಿಕೊಂಡು ರಾಯರನ್ನು ಹೊರಗೆ ಕರೆದೊಯ್ದರು. ಮಂಗಳಾರತಿ ಮುಗಿಯಿತು. ಸಭಿಕರು ಗುರುಶಿಷ್ಯರನ್ನು ಮೆಚ್ಚುತ್ತಾ ಹೊರಟು ಹೋದರು.

ತೊಟ್ಟಿಯಲ್ಲಿ ಉಳಿದವರು ರಾಯರು, ರಾಮು ಇಬ್ಬರೇ. ಇಬ್ಬರಿಗೂ ಒಂದೇ ಬಗೆಯ ಮನಸ್ಸು. ಏನೋ ಹೇಳಬೇಕೆಂಬ ಹಂಬಲ-ಹೇಳಲಾಗದ ದೌರ್ಬಲ್ಯ. ಈ ನಾಟಕವನ್ನು ನೋಡುತ್ತಾ ಮಂದಾಸನದಲ್ಲಿ ಮಂಡಿಸಿದ್ದ ರಘುರಾಮನು ನಕ್ಕಂತಾಯಿತು. ರಾಯರು ಸೂಜಿಗಲ್ಲಿಂದ ಸೆಳೆಯಲ್ಪಟ್ಟ ಕಬ್ಬಿಣದಂತೆ ಅತ್ತ ತಿರುಗಿದರು. ರಾಮುವು, ಉಕ್ಕುತ್ತಿದ್ದ ಭಾವರಸಗಳ ಪ್ರವಾಹವನ್ನು ತಡೆಯಲಾರದೆ ಭರದಿಂದ ಬಂದು ರಾಯರ ಚರಣಗಳಮೇಲೆ ಬಿದ್ದುಬಿಟ್ಟನು. ರಾಯರಿಗೆ ಕಟ್ಟಿದ್ದ ಗಂಟಲು ಬಿಟ್ಟಿತು. ರಾಮುವನ್ನಾದರದಿಂದಪ್ಪಿ:—

'ಕಂದಾ, ತಮ್ಮ ಮಗಳೂಂತ ತಿಳ್ಕೊಳ್ಳೋಕೆ ನನ್ನ ಎಂತಾ ಅಂಗಲಾಚಿದ ಸುಂದರನ ಮಾತು ಕೇಳದೆ ಹೋದೆ....ಆದರೆ ನಿನ್ನಂತೂ ಖಂಡಿತಾ ನನ್ನ ಮಗಾಂತ ಭಾವಿಸುತ್ತೇನಪ್ಪಾ' ಎಂದರು.

ಈ ವೇಳೆಗೆಲ್ಲಿಂದಲೋ 'ನಮ್ಮ ರಾಮು ಹುಟ್ಟಿದ ಹಬ್ಬ ಎಂದೂಂದ್ರೆ' ಎಂದು ಒಂದು ಧ್ವನಿ ಕೇಳಬಂದಿತು. ಎದುರಿಗೆ ರಾಯರ ಕುಟುಂಬ. ರಾಯರ ನೋಟ ಹೆಂಡತಿಯ ನೋಟದಲ್ಲಿ ಸೇರಿತು. ಕೂಡಲೇ ಮಿಂಚು ಹೊಳೆದಂತೆ ಇಬ್ಬರಿಗೂ ಅಶ್ರುಧಾರೆ ಹರಿಯಿತು. ಅವಳಿ ಮಕ್ಕಳಂತೆ ಒಂದಾಗಿದ್ದ ಪ್ರೇಮ, ಕ್ಷಮೆಗಳ ಮಹಿಮೆಯನ್ನು ರಾಯರು ಆ ಕಂಬನಿಯಲ್ಲಿ ಕಂಡರು.

———()———

# ಮುಗಿಯದ ಕಥೆ

—:—

೧

ಸುಬ್ಬಣ್ಣನ ಮನೆಯ ಮುಂದೆ ಇಬ್ಬರು ಮೂವ್ವರು ಭಿಕ್ಷುಕರು ಮೂಗರಳಿಸಿಕೊಂಡು, ಬಾಯಿ ತೆರೆದುಕೊಂಡು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಭಿಕ್ಷಕ್ಕಾಗಿ ಕೂಗಿಕೂಗಿ ಅವರಿಗೂ ಸಾಕಾಗಿತ್ತು. ಪ್ರಾಯಶಃ ಮನೆಯವರನ್ನು ಬಯ್ದುಕೊಳ್ಳುತ್ತಿದ್ದರೇನೋ? ಆ ಹೊತ್ತಿಗೆ ಸರಿಯಾಗಿ ಪೇಟೆಗೆ ಹೋಗಿದ್ದ ಸುಬ್ಬಣ್ಣ ಕಯ್ಯಲ್ಲಿ ಛತ್ರಿ ಹಿಡಿದುಕೊಂಡು, ಹಣ್ಣು ಹೂವು ತರಕಾರಿಗಳ ದೊಡ್ಡ ಬುಟ್ಟಿಯನ್ನು ಹೊತ್ತಿದ್ದ ಕೂಲಿಯೊಬ್ಬನನ್ನು ಕರೆದುಕೊಂಡು ಮನೆಯ ಬಳಿಗೆ ಬಂದು ಭಿಕ್ಷುಕರನ್ನು ಗದರಿಸಿದನು. ಆ ಮೂವ್ವರಲ್ಲಿ ಮುದಿಯನೊಬ್ಬನು ಮುಂದೆಬಂದು :—

'ಏನಾದರೂ ತಿನ್ನೋಕೆ ಕೊಡು ಮಾರಾಯ....ಮೂರು ದಿವಸದಿಂದ ಉಪವಾಸ....ಮಕ್ಕಳು ಹಸಿದವೆ.'

ಎಂದನು. ಬಿಸಿಲಿನ ಝಳದಿಂದ ಬಾಡಿದ್ದ ಸುಬ್ಬಣ್ಣನಿಗೆ ಭಿಕ್ಷುಕನ ನುಡಿಯು ಮನಸ್ಸಿಗೆ ಹಿಡಿಯಲಿಲ್ಲ. ಮತ್ತೆ ಗದರಿಸಿ ಮನೆಯ ಒಳಕ್ಕೆ ಕೂಲಿಯನ್ನು ಸಾಗಿಸಿ ತಾನು ಹೋಗುತ್ತಿರಲು ಅದೇ ಭಿಕ್ಷುಕನು :—

'ದಿನಾ ಮನೇತಾವ ಗಮಗಮಾಂತೈತೆ. ಬಡವರಿಗೆ ಒಸ್ಟುತ್ತೂಟ ಕೊಡು ಮಾರಾಯ. ಶಿವಾ ನಿಂಗೂ ಕೊಡ್ತಾನೆ.

ಎಂದನಲು ಸುಬ್ಬಣ್ಣನ ಅಂತಃಕರಣ ಕೊಂಚ ಕಲಕಿದಂತಾಯಿತು. ಒಳಗಿನಿಂದ ಅರೆಪಾವು ಅಕ್ಕಿತಂದು ಭಿಕ್ಷುಕರಿಗೆ ಹಾಕಿ ಅವರನ್ನು ಕಳುಹಿಸಿಬಿಟ್ಟನು.

ಸುಬ್ಬಣ್ಣನ ಮನೆಯಲ್ಲಿ ದಿನದಿನವೂ ಬಗೆಬಗೆಯ ರುಚಿರುಚಿಯಾದ ತಿಂಡಿತಿನಿಸುಗಳನ್ನು ಮಾಡುವ ಸುದ್ದಿ ಬಸವನಗುಡಿಗೆಲ್ಲಾ ತಿಳಿದಿತ್ತು. ಆದರೆ ಅವನ ಮನೆಗೆ ಧೈರ್ಯವಾಗಿ ಕಾಲಿಟ್ಟು ಅವುಗಳಲ್ಲಿ ಪಾಲುತೆಗೆದುಕೊಳ್ಳುವ

ಭಾಗ್ಯವೂ ಧೈರ್ಯವೂ ಕೆಲವರದು ಮಾತ್ರವಾಗಿತ್ತು. ಸುಬ್ಬಣ್ಣನು ಲೋಭಿಯೇನಲ್ಲ. ಕಂಡು ಕಂಡವರನ್ನು ಕರೆದು ಅವರಿಗೆ ದಿನವೂ ಸಂತರ್ಪಣೆ ಮಾಡಿಸಿ ಕಳುಹಿಸುವ ವಿಚಾರದಲ್ಲಿ ಮಾತ್ರ ಅವನಿಗಕ್ಕರೆಯಿರಲಿಲ್ಲ. ಸರಸಮ್ಮನ ಸ್ವಭಾವ ಬೇರೆತರದ್ದು. ತನ್ನ ಬಳಗದವರೆಷ್ಟು ಜನ ಬಂದರೂ ಅವರಿಗೆ ಬೇಸರವಿಲ್ಲದೆ ದುಡಿದು ಹಾಕುವಳು. ಅವರು ಇದ್ದಷ್ಟು ದಿನವೂ ರಾಜವೈಭವದಲ್ಲಿ ಮೆರಸಿ ಸಂತೋಷಪಡಿಸಿ ಕಳುಹಿಸುವಂತಹ ಕರುಣಾಳು. ಆದರೆ ಗಂಡನ ಕಡೆಯ 'ಕಾಗೆಬಳಗ'ದವರು ಯಾರಾದರೂ ದಾರಿ ತಪ್ಪಿ ಒಪ್ಪೊತ್ತಿನ ಊಟಕ್ಕೆ ಬಂದರೆ ಅವರು ಎಂದೆಂದಿಗೂ ಮರೆಯಲಾಗದಂತಹ ಉಪಚಾರೋಕ್ತಿಗಳಿಂದ ಆದರಿಸಿ ಕಳುಹಿಸಿಕೊಡುವಳು. ಸುಬ್ಬಣ್ಣ ಸರಸಮ್ಮ ಇವರ ದಾಂಪತ್ಯವನ್ನು 'ಅನ್ಯೋನ್ಯ ದಾಂಪತ್ಯ'ವೆಂದು ಮಾತ್ರವಲ್ಲ 'ಆದರ್ಶ ದಾಂಪತ್ಯ'ವೆಂದೂ ಹೇಳಬೇಕಾಗುತ್ತದೆ. ಗಂಡಹೆಂಡಿರ ಅಭಿರುಚಿಗಳೆರಡೂ ಒಂದೇತರದ್ದು. ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ಮಾಡಿಕೊಂಡು ಚೆನ್ನಾಗಿ ತಿಂದು ತೇಗಿ, ಅಂದಿನ ರಾತ್ರಿ ದಾಂಪತ್ಯ ಜೀವನದ ಅನುಕೂಲ್ಯವನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಬಿಟ್ಟರೆ ತೀರಿತು! ಅದಕ್ಕೂ ಮುಂದೆ ಜಗತ್ತಿದೆಯೆಂಬುದರ ಅರಿವೇ ಅವರಿಗೆ ಬೇಕಿರಲಿಲ್ಲ!!

ಸುಬ್ಬಣ್ಣನಿಗೆ ರೈಲಿನಲ್ಲಿ ಒಂದು ಹುದ್ದೆಯಿತ್ತು. ಗೊತ್ತಾದ ವರಮಾನ ೩೦ ರೂಪಾಯಿಗಳ ಜೊತೆಗೆ ೫೦-೧೦೦ ರಷ್ಟು 'ಅನ್ಯಾಯಾರ್ಜಿತ ವಿತ್ತವೂ' ಸೇರುತ್ತಿತ್ತು. ಉದ್ಯೋಗದಿಂದ ಹಿಂತಿರುಗುವಾಗ ಯಾರನ್ನಾದರೂ ಸುಲಿದು ಏನಾದರೂ 'ಗೃಹೋಪಸ್ಕರ'ವನ್ನು ಸುಬ್ಬಣ್ಣ ತರದಿರುತ್ತಲೇ ಇರಲಿಲ್ಲ. ಏನೂ ಸಿಕ್ಕದಿದ್ದ ದಿವಸ ಒಂದು ಗೊನೆ ಬಾಳೇಕಾಯಿಯಾಯಿತು.....ಇಲ್ಲಾ ನಾಲ್ಕು ಕಟ್ಟು ವೀಳೆಯದೆಲೆ....ಇಲ್ಲಾ ಎರಡು ಮೊಸ್ನೇ ಕಟ್ಟು. ಅವುಗಳ ಬೆಲೆಯನ್ನು ತನ್ನ ಸಂಸಾರದ ಕ್ಷಣಿಕ ಸುಖದ ಮಾನದಂಡದಿಂದ ಅಳೆಯುತ್ತಿದ್ದನೇ ವಿನಾ ಆತ್ಮಗೌರವವೆಂಬ ಮಾನದಂಡದಿಂದ ಅಳೆಯುತ್ತಿರಲಿಲ್ಲ. ಜೀವನವು ಸೃಷ್ಟಿಯಾಗಿರುವುದು ಸುಖಪಡುವುದಕ್ಕೆ ಎಂಬುದೇ ಸುಬ್ಬಣ್ಣನ ವೇದಾಂತ. ಅವನ ಸುಖದ ಕಲ್ಪನೆಯಾದರೋ ಬಹು ವಿಚಿತ್ರವಾಗಿತ್ತು. ಸುಬ್ಬಣ್ಣನಿಗೂ ಸರಸಮ್ಮನಿಗೂ ಸಾಮಾನ್ಯವಾಗಿ ಯಾವ ಕಾರಣಕ್ಕೂ ವ್ಯಾಜ್ಯವಾಗುತ್ತಿರಲಿಲ್ಲ. ಅವನಿಗೆ ಖಾರದ ಪದಾರ್ಥಗಳ ಮೇಲೆ ವಿಶ್ವಾಸ.

ಅವನಿಗೆ ಸಿಹಿ ಪದಾರ್ಥಗಳ ಮೇಲೆ ವಿಶ್ವಾಸ. ಇಬ್ಬರೂ ಒಬ್ಬರೊಬ್ಬರ ಆಸೆ ಅಭಿರುಚಿಗಳನ್ನು ಗೌರವಿಸಿಕೊಂಡು ಬಹಳ ಅನ್ಯೋನ್ಯವಾಗಿಯೇ ಇದ್ದರು. ಒಂದೊಂದುಸಲ ಸರಸಮ್ಮನಿಗೆ ತನ್ನ ಪುಟ್ಟಕೂಸು 'ಕುಸುಮಾ' ತನ್ನಂತೆ ಹುಟ್ಟಲಿಲ್ಲವಲ್ಲಾ ಎಂದು ಚಿಂತೆ; ಯಾರಂತೆ ಹುಟ್ಟಿದರೇನು ಮುಖ್ಯ ಒಂಭತ್ತು ತಿಂಗಳು ಹೊರೆಹೊತ್ತ ತನ್ನ ಶ್ರಮ ಪರಿಹಾರವಾಯಿತಲ್ಲಾ ಎಂದು ಸಮಾಧಾನ. ಸುಬ್ಬಣ್ಣನ ಕೆಲಸವು ಅವನಿಗೆ ತಿಂಗಳಿಗೆ ೧೫ ದಿವಸಗಳ ಮನೆಯ ವಾಸವನ್ನು ಒದಗಿಸಿತ್ತು. ಅವನು ಒಮ್ಮೊಮ್ಮೆ 'ಡ್ಯೂಟಿ'ಯಿಂದ ಹಿಂತಿರುಗುವಾಗ ತನ್ನ ಚಿಕ್ಕ ಮಗಳನ್ನು ನೆನಸಿಕೊಂಡು ಅವಳಿಗೆ ಚೆನ್ನಪಟ್ಟಣದ ಬಣ್ಣದ ಗಿಲಿಕೆಯನ್ನೋ, ಮೈಸೂರಿನಿಂದ ಒಂದು ಚೂರು ರೇಶಿಮೆಯ ಬಟ್ಟೆಯನ್ನೋ ತರುವನು. ಸುಬ್ಬಣ್ಣನು ಅಂತರಂಗದಲ್ಲಿ ತನ್ನ ಮಗುವಿಗೆ ಒಂದು ವಿಶೇಷಸ್ಥಾನವನ್ನಿತ್ತಿದ್ದನು. ಹೆಂಡತಿಯ ಉಪಯೋಗವು ತನಗೆ ಅವಳ ಉಪಯೋಗ ಎಷ್ಟೋ ಅಷ್ಟೇ ಎಂದು ಗ್ರಹಿಸಿಕೊಂಡಿದ್ದರೂ ಮಗುವಿನ ವಿಚಾರದಲ್ಲಿ ಹೃದಯವನ್ನು ತೆರೆದುಬಿಟ್ಟಿದ್ದನು. ತನ್ನ ಮಗುವಿನ ಭವಿಷ್ಯತ್ತನ್ನೊಮ್ಮೊಮ್ಮೆ ನೆನೆನೆನೆದು ತನ್ನಷ್ಟಕ್ಕೆ ತಾನೇ ಹಿಗ್ಗುವನು; ಅದನ್ನು ತನ್ನ ಪತ್ನಿಗೆ ಸಮನಾಗಿ ಹಂಚಲಾರೆನಲ್ಲಾ ಎಂದು ತಗ್ಗೂತಗ್ಗುವನು. ಆದರೆ ಆ ವಿಧವಾದ ಒಳಗೊಂದಲಕ್ಕೆ ಮನಸ್ಸುಕೊಡುವ ಪ್ರಕೃತಿಯು ಸುಬ್ಬಣ್ಣನದಲ್ಲವಾದ್ದರಿಂದ ಆ ಹಿಗ್ಗುತಗ್ಗುಗಳು ಬಂದಂತೆಯೇ ಮಾಯವಾಗಿ ಬಿಡುತ್ತಿದ್ದವು.

ಸರಸಮ್ಮನ ಜೀವನವು ಅವಳಿಗೇ ಒಂದು ಸಮಸ್ಯೆಯಾಗಿತ್ತು. ವಯಸ್ಸು ೧೮-೧೯ಕ್ಕೆ ಮೀರಿಲ್ಲದಿದ್ದರೂ ಜೀವನದಲ್ಲಿ ಒಂದು ಬಗೆಯ ಜಿಗುಪ್ಸೆ ಹುಟ್ಟಿತ್ತು. ಜೀವನದ ಸುಖದ ಸ್ವರೂಪವನ್ನು ಕಂಡು ಅದು ಶುದ್ಧ ಜೊಳ್ಳು ಎಂಬ ನಿರ್ಧಾರಕ್ಕೆ ಬರುವ ಅನಾಸಕ್ತಿ ಭಾವದ ಜಿಗುಪ್ಸೆಯಲ್ಲ; ಜೀವನದ ಸುಖವನ್ನು ಅದರ ಸಂಪೂರ್ಣ ಸ್ವರೂಪದಲ್ಲಿ ಅನುಭವಿಸಲಾಗದ ಲೋಪದಿಂದ ಹುಟ್ಟಿದ ಜಿಗುಪ್ಸೆ!! ಗಂಡನೆಂದರೆ ತನಗೆ ದುಡಿದು ತಂದುಹಾಕುವ ಒಂದು ಯಂತ್ರ; ಮಗುವೆಂದರೆ ತಾನು ಗಂಡನ ದುಡಿತಕ್ಕೆ ತೋರಿದ ಕೃತಜ್ಞತೆಯ ಪರಿಣಾಮ. ಈ ಹಂತಗಳ ಮೇಲೆ ಅವಳ ಮನಸ್ಸು ಹಾಯ್ದಿರಲಿಲ್ಲ.

ಅಂತಹ ಜೀವನದಲ್ಲಿಯೂ ದುಃಖಕ್ಕೆಡೆಯಿತ್ತು. ಸುಖದ ಮಿಂಚೊಮ್ಮೆ ಹೊಳೆಯಿತೆಂದರೆ ದುಃಖದ ಸಿಡಿಲು ಹಿಂದೆಯೇ ಸಿದ್ಧವಾಗಿರುತ್ತದೆಂಬುದರ

ಅರಿವು ಸಮಗಾಗುವುದಿಲ್ಲ. ಸತ್ಯದ ಅರಿವು ಹುಡುಕಿಕೊಂಡು ಹೋಗುವವರಿಗಲ್ಲವೇ ಗೊತ್ತಾಗುವುದು. ಜೇನನ್ನು ಕೀಳಹೋಗುವ ನಾವು ಅನೇಕಸಲ ದುಂಬಿಗಳ ದಂಶನವನ್ನು ತಪ್ಪಿಸಿಕೊಳ್ಳುವುದಿಲ್ಲ. ಸುಬ್ಬಣ್ಣನ ನಿರಾತಂಕ ಜೀವನದಲ್ಲಿಯೂ ಅಂತಹ ಘೋರಿರುಳೊಂದು ಸಮೀಪಿಸುತ್ತಿತ್ತು. ಅವನಿಗಾಗದವರು ಸುಳ್ಳು ಹೆಸರಿನಲ್ಲಿ ಮೇಲಿನ ಅಧಿಕಾರಿಗಳಿಗೆ ಅವನ ಲಂಚಗೂಳಿತನದ ವಿಚಾರ ವರದಿಗಳನ್ನು ಬರೆಯುತ್ತಿದ್ದರು. ರೃಶ್ವಿಯ ರಾಜ್ಯದಲ್ಲಿ ಲಂಚಗೂಳಿತನವೆಂಬ ಪ್ರತ್ಯೇಕ ಪಟ್ಟಣವೊಂದಿಲ್ಲ; ಆದರೆ ಅಲ್ಲಿನರಸರಿಗೆ ಪ್ರಜೆಯಲ್ಲಿ ಒಬ್ಬನು ಬೇಡವಾದರೆ ಕಾರಣವನ್ನೊದಗಿಸಿ ಗಲ್ಲಿಗೇರಿಸುವುದಕ್ಕೆ ಆ ಕುಂಟುನೆಪದ ಮುಂದೆ ಯಾವವೂ ನಿಲ್ಲುತ್ತಿರಲಿಲ್ಲ. ಲಂಚಗೂಳಿತನದ ಕಪ್ಪುಮೋಡವು ಕ್ರಮಕ್ರಮೇಣ ಸುಬ್ಬಣ್ಣನ ಜೀವನಾಕಾಶವನ್ನಾವರಿಸುತ್ತಿದ್ದಿತು.......ಮನೆಯಲ್ಲಿಯೂ ಆಗಲೇ ಗೊಂದಲ. ಕುಸುಮನಿಗೆ ಆಗಾಗ್ಗೆ ವಾಯು ಬರುತ್ತಿದ್ದಿತು. ವೈದ್ಯರೊಬ್ಬರು ತಾತ್ಕಾಲಿಕ ಉಪಶಮನವನ್ನು ಮಾಡಿ ಸುಬ್ಬಣ್ಣನ ಕಿಸೆಯನ್ನು ಬರಿದುಮಾಡಿದ್ದರು. ಈಗವೇ ವ್ಯಾಧಿಯು ಘೋರ ರೂಪದಲ್ಲಿ ಕಾಣಿಸಿಗೊಂಡಿತು. ಮಗುವಿಗೆ ೨೨ ದಿವಸಗಳಿಂದ ಬಂದಿದ್ದ ಜ್ವರ ಕಡಿಮೆಯಾಗುವ ಯಾವ ಚಿಹ್ನೆಯೂ ಕಾಣಬರಲಿಲ್ಲ. ರಜೆಯನ್ನು ಬೇಡಿದರೆ ನಿರ್ಭಾಗ್ಯ ಸುಬ್ಬಣ್ಣನಿಗೆ ಅದೂ ದೊರೆಯದಾಯಿತು.

ಆಷಾಢಮಾಸದ ಒಂದು ಬೆಳಿಗ್ಗೆ. ಸುಬ್ಬಣ್ಣ ತನ್ನ ಉದ್ಯೋಗೋಚಿತವಾದ ನೀಲಾಂಬರಗಳನ್ನು ಧರಿಸಿ ಒಂದು ಕಯ್ಯಲ್ಲಿ ಕೆಂಪು ಹಸುರಿನ ಎರಡು ಬಾವುಟಗಳನ್ನೂ ಮತ್ತೊಂದು ಕಯ್ಯಲ್ಲಿ ಒಂದು ಲಾಂದ್ರವನ್ನೂ ಹಿಡಿದು ಹೊರಟಿದ್ದಾನೆ. ಹೊರಗೆ ಪಟಪಟನೆ ಹನಿಯ ಶಬ್ದವಾಗುತ್ತಲಿದೆ. 'ಕುಸುಮ'ಳ ತೊಟ್ಟಿಲ ಹಗ್ಗವನ್ನು ಹಿಡಿದು ಬಾಧೆಯಿಂದ ಬಳಲಿ....ನಿಶ್ಶಕ್ತಳಾಗಿ....ನಿದ್ದೆಬಂದಂತೆ ಮಲಗಿದ್ದ ತನ್ನ ಮುದ್ದುಮಗಳನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದಾನೆ. ಇಂತಹ ಸನ್ನಿವೇಶದಲ್ಲಿ ಮಗಳನ್ನು ಬಿಟ್ಟು ಹೋಗಬೇಕಲ್ಲಾ ಎಂದು ಮನದಲ್ಲಿ ಮರುಗಿದ. 'ಹಾಳು ಕೆಲಸಕ್ಕೆ ರಾಜೀನಾಮೆಯನ್ನಿತ್ತು ಸುಖವಾಗಿ ಮನೆಯಲ್ಲಿದ್ದುಬಿಡಲೇ' ಎಂದು ನೆನೆಯುವನು. ಮರುಕ್ಷಣವೇ ಮಗಳ ಮುಂದಿನ ಬಾಳಿನ ಕಡೆಗೆ ಲಕ್ಷ್ಯವೋಡಿತು. ಕುಸುಮಳಿಗೆ ಮದುವೆಮಾಡುವುದು ಹೇಗೆ—ಒಳ್ಳೆಯ ವರನನ್ನು ಸಂಪಾದಿಸಿ ಅವ

ಳನ್ನೂ ಅವನನ್ನೂ ಯೋಗ್ಯರೀತಿಯಲ್ಲಿಡುವುದು ಹೇಗೆ.....ಕುಸುಮಳು ಒಬ್ಬರ ಆಶ್ರಯಕ್ಕೆ ಸಿಲುಕದಂತೆ ಸ್ವತಂತ್ರಳಾಗಿರಲು ಅವಳಿಗೆ ಹಣಕಾಸಿನ ಅನುಕೂಲ ಒದಗಿಸುವುದು ಹೇಗೆ? ತಾನು ಕೆಲಸಕ್ಕೆ ರಾಜೀನಾಮೆಯನ್ನಿತ್ತರೆ ಮುಂದೆ ತನ್ನ ಸಂಸಾರವನ್ನು ನಿಭಾಯಿಸುವುದಾದರೂ ಹೇಗೆ? ಎಂಬ ಯೋಜನಾಪರಂಪರೆಗಳಿಗೀಡಾಗಿ ತನ್ನ ಹುಚ್ಚನ್ನು ಹುಟ್ಟಿದಲ್ಲಿಯೇ ಮುರಿದು ಬಿಟ್ಟನು....ಮತ್ತೆ ಮತ್ತೆ ಮಲಗಿದ್ದ ಮಗಳನ್ನು ಮುದ್ದಿಸುವನು....ಕುಸುಮಳ ಎಳೆಗೈಯನ್ನು ಕೋಮಲವಾಗಿ ಹಿಡಿದು ಅದನ್ನು ತನ್ನ ಕೆನ್ನೆಯಮೇಲೆ ಆಡಿಸಿಕೊಳ್ಳುತ್ತಾ ಮತ್ತೆ ಮತ್ತೆ ಅದನ್ನು ಚುಂಬಿಸುವನು. ಈ ವೇಳೆಗೆ ಆಕಸ್ಮಿಕವಾಗಿ ತಲೆಯೆತ್ತಿ ನೋಡಿದನು. ತನ್ನ ಹೆಂಡತಿಯು ನಿರಾತಂಕಳಾಗಿ ನಿತ್ಯಗೆಲಸದಲ್ಲಿ ಮಗ್ನಳಾಗಿದ್ದ ನೋಟವನ್ನು ಕಂಡನು. ಅವಳ ಮನಃಸ್ಥೈರ್ಯವನ್ನು ಬೇರೆ ಸನ್ನಿವೇಶದಲ್ಲಿಯಾಗಿದ್ದರೆ ಮೆಚ್ಚಿ ಪಾರಿತೋಷಿಕ ಕೊಡುತ್ತಿದ್ದನು. ಆದರೆ....ಈಗ....ತನ್ನ ಮತ್ತು ಅವಳ ಮಗು....ಕುಸುಮ ಹೀಗೆ ಜೀವಸಾವುಗಳ ಮಧ್ಯೆ ತೂಗುತ್ತಲಿದ್ದಾಗ ಅವಳೆಂತು ನಿಶ್ಚಿಂತಳಾಗಿದ್ದಾಳೆಂದು ಕನಲಿದನು. ಹೆಂಡತಿಯನ್ನು ಕರೆದು ಅವಳಿಗೆ ವಿವರವಾಗಿ ಮಗುವಿನ ಪೋಷಣೆಯ ವಿಚಾರವನ್ನು ಹೇಳಿ, ಅನುಪಾನದ ವಿಚಾರ ಎಚ್ಚರಿಸಿ, ಜಾಗರೂಕಳಾಗಿರಬೇಕೆಂದು ಮತ್ತೆ ಮತ್ತೆ ಮನಗಾಣಿಸಿ ಮಗುವಿನ ಮಂದಿರವನ್ನು ಬಿಡಲೆತ್ನಿಸಿದನು. ಮಲಗಿದ್ದ ಮಗುವಿನ ಮುಖದಮೇಲೆ ಒಂದುತೆರನ ಸರಳ ಕಳೆಯಿದ್ದಂತೆ ಕಾಣಬಂತು. ಅವಳು ಕೇಕೆಹಾಕುತ್ತಾ ತೊಟ್ಟಿಲನಲ್ಲಿ ಮಲಗಿ ತಾನು ಆಸತೋರುತ್ತಿದ್ದ ಗಿಣಿಗೆ ಕೈಚಾಚುತ್ತಾ ಅದು ತನ್ನ ಕೈಗೆ ಸಿಲುಕದೆ ಮೇಲಕ್ಕೆ ಹೋದಾಗ ಮತ್ತೂ ಘಟ್ಟಿಯಾಗಿ ಕೇಕೆ ಹಾಕಿ, ತನ್ನ ಪುಟ್ಟ ಕೈಗಳಿಂದ ಗಿಣಿಯನ್ನು ಕರೆಯುತ್ತಿದ್ದಂತೆ....ತನ್ನನ್ನು ಈಗ ಕರೆಯುತ್ತಿದೆಯೋ ಎನಿಸಿತು. 'ವಿಧಿಯಿಲ್ಲ....ಹೋಗಲೇಬೇಕು' ಎಂದು ಮನದಣಿಯ ತನ್ನ ಅಧಿಕಾರಿಗಳನ್ನು ಬಯ್ದುಕೊಂಡು ಅಲ್ಲಿಂದೆದ್ದನು........ ಹೆಂಡತಿಯ ಕೈಹಿಡಿದುಕೊಂಡು ಬಾಗಿಲವರೆಗೂ ಬಂದನು. ಗಂಡಸರ ಗಂಡನಾದ ಸುಬ್ಬಣ್ಣನ ಕಣ್ಣಲ್ಲಿಯೂ ಅಂದಿನ ನೋಟವು ನೀರುತರಿಸಿತ್ತು. ಒಂದು ಪಕ್ಕಕ್ಕೆ ತಿರುಗಿ ನೀರಳಿಸಿಕೊಂಡು, ಸರಸನ ಭುಜದಮೇಲೆ ಅನುರಾಗಪೂರ್ವಕವಾಗಿ ಕೈಹಾಕಿ ಅವಳನ್ನೊಮ್ಮೆ ನೋಡಿದನು. ಸರಸನಿಗೆ

ಗಂಡನ ಮನಸ್ಸು ಗೊತ್ತಾಗಲಿಲ್ಲ. ಹೊತ್ತುಮೀರುತ್ತ ಬಂದಿರಲು ಹೆಂಡತಿಯನ್ನು ಹತ್ತಿರ ಸೆಳೆದು ಅಪ್ಪಿ, ಮೃದುವಾಗಿ ಚುಂಬಿಸಿ 'ಸರಸಾ' ಎಂದನು.

ಗಂಡನ ಹೊಸ ನಡತೆಗೆ ಅರೆಮೂಕಳಂತಾಗಿದ್ದ ಸರಸಾ ಮೆಲ್ಲನೆ 'ಏನು' ಎಂದಳು.

'ನಾನು ಹೋಗಿ ಬರುತ್ತೇನೆ. ಮಗುವನ್ನು ಹುಷಾರಾಗಿ ನೋಡಿಕೋ. ನನ್ನ ಮನಸ್ಸೆಲ್ಲಾ ಅದರಮೇಲೇ........'

ಮುಂದೆ ಹೇಳಲಾಗದೆ ಹೆಂಡತಿಯ ಕೈಯನ್ನೊಮ್ಮೆ ಗಟ್ಟಿಯಾಗಿ ಅದುಮಿ, ಬಾವುಟ ಲಾಂದ್ರಗಳನ್ನು ಹಿಡಿದು ಹೊರಟುಹೋದನು. ಸರಸಮ್ಮ ಸ್ವಲ್ಪಹೊತ್ತು ಹಾಗೆಯೇ ನಿಂತು ಗಂಡನ ವರ್ತನವನ್ನು ಕುರಿತು ಚಿಂತಿಸಿದಳು. ಬಗೆಹರಿಯದಾಯಿತು. ಸುಮ್ಮನೆ ತನ್ನ ಬುದ್ಧಿವಂತಿಕೆಯನ್ನು ಈ ನೀರಸ ವಿಷಯಗಳ ಯೋಚನೆಯಲ್ಲೇತಕ್ಕೆ ಕಳೆಯುವುದೆಂದುಕೊಂಡು, ನಕ್ಕು, ಬಾಗಿಲುಹಾಕಿಕೊಂಡು ಒಳಗೆ ಹೋಗಿಬಿಟ್ಟಳು.

೨

ಆ ದಿವಸದ 'ಡ್ಯೂಟಿ'ಯನ್ನು ಸುಬ್ಬಣ್ಣ ಹೇಗೋ ಮುಗಿಸಿದ್ದ. ಎಚ್ಚರತಪ್ಪಿ ಎಲ್ಲಿ ಆಘಾತಗಳಿಗೆಡೆಕೊಡುವೆನೋ ಎಂದು ಬಹು ಜಾಗರೂಕತೆಯಿಂದ ನಡೆದುಕೊಂಡು, ಮೇಲಿನ ಆದಾಯಕ್ಕೆ ಸ್ವಲ್ಪವೂ ಗಮನಕೊಡದೆ ಮನೆಯನ್ನು ಎಷ್ಟುಹೊತ್ತಿಗೆ ಸೇರುವೆನೆಂಬ ಒಂದೇ ಯೋಚನೆಗೆ ಮನಸ್ಸನ್ನು ಒಪ್ಪಿಸಿಬಿಟ್ಟಿದ್ದನು. 'ಡ್ಯೂಟಿ'ಯು ಮುಗಿಯಿತು. ಬೆಂಗಳೂರು ರೈಲ್ವೆಯ ಸ್ಟೇಷನ್ ಬಳಿ ತನಗೆ ಮೇಲಿನ ಅಧಿಕಾರಿಗಳಿತ್ತ ಲಕೋಟೆಯೊಂದನ್ನು ನೋಡಿಕೊಳ್ಳುವಷ್ಟು ವ್ಯವಧಾನವೂ ಇಲ್ಲ. ಮನೆಗೊಂದು ಗಾಡಿಯನ್ನು ಗೊತ್ತುಮಾಡಿಕೊಂಡು ಹೊರಟನು. ದಾರಿಯಲ್ಲಿ ವಿಧವಿಧವಾದ ಚಿಂತೆಗಳು. ತನ್ನ ಮಗು ತಾನು ಮನೆಯನ್ನು ಸೇರುವ ಹೊತ್ತಿಗೆ ಏನುಮಾಡುತ್ತಿರಬಹುದು. ತನ್ನನ್ನು ಕಂಡಕೂಡಲೆ ಹೇಗೆ ಕೇಕೆಹಾಕಿ ಹಿಗ್ಗುವುದು.... ತಾನು ಹೇಗೆ ಅದನ್ನು ಲಾಲಿಸಬೇಕು. ಈ ಸವಿಗನಸುಗಳನ್ನು ಕಾಣುತ್ತ ಗಾಡಿಯಲ್ಲಿ ಮೆಲ್ಲನೆ ಅಧಿಕಾರಿಗಳಿತ್ತ ಲಕೋಟೆಯನ್ನೊಡೆದನು. ಮುಖದಲ್ಲಿ

ಭೀತಿ ಕಾಣಿಸಿಕೊಂಡಿತು. ಭೀತಿಯ ಉದ್ವೇಗದಲ್ಲಿ ಧಾರೆಧಾರೆಯಾಗಿ ಬೆವರ್ಹನಿಗಳು ಜಾರಿದವು. ಕರವಸ್ತ್ರದಿಂದ ಮುಖವನ್ನೊರೆಸಿಕೊಳ್ಳುತ್ತಾ ಗಾಡಿಯವನಿಗಾಶ್ಚರ್ಯವಾಗುವಂತೆ ಗಟ್ಟಿಯಾಗಿ ನಕ್ಕನು. ಆ ನಗುವಿನ ಮಧ್ಯೆ ಕಾಗದವನ್ನು ಓದಿದನು....ಮತ್ತೆ ಮತ್ತೆ ಓದಿದನು:—

ಮ|| ರಾ|| ಸುಬ್ಬಣ್ಣನವರ ಸ|| ಕ್ಕೆ.

ತಮ್ಮ ಮೇಲೆ ಬಂದಿರುವ ಅನೇಕ ಆಪಾದನೆಗಳ ಆಧಾರದಿಂದ ಇಂದು ತಮ್ಮನ್ನು ಕೆಲಸದಿಂದ ನಿವೃತ್ತರನ್ನಾಗಿಸಿದ್ದೇನೆ.

—ಅಧಿಕಾರಿ.

ಎರಡು ದಿವಸಗಳ ಹಿಂದೆ ಕೆಲಸಕ್ಕೆ ರಾಜೀನಾಮೆಯನ್ನು ಕೊಡುವ ತನ್ನ ಭಾವನೆಯು ರೂಪುಗೊಂಡುದುದಕ್ಕಾಗಿ ನಗು....ಆದರೆ ಇಂದು ಆಕಸ್ಮಿಕವಾಗಿ ಇದು ಒದಗಿ ತನ್ನ ತಲೆಯಮೇಲೆ ದೊಡ್ಡ ಚಟ್ಟವನ್ನೆತ್ತಿ ಹಾಕಿದಂತಾಯಿತಲ್ಲಾ ಎಂಬ ಭೀತಿಯನ್ನು ಮರೆಯಲು ನಗು....ಮುಂದೆ....ಮುಂದೇನು ಮಾಡುವುದು? ಎಂಬ ಪ್ರಶ್ನೆಗೆ ಉತ್ತರಕೊಡಲಾಗದ ಅಸಹಾಯಕತೆಯನ್ನು ಸ್ಮರಣದಿಂದಳಿಸಲು ನಗು? ನಗುತ್ತ ನಗುತ್ತ ಮನೆಯ ಕಡೆಗೆ ತೆರಳಿದನು. ಇದಕ್ಕೆಲ್ಲ ಮನೆಯಲ್ಲಿ ಪೂರ್ಣ ವಿಶ್ರಾಂತಿ ಸಿಕ್ಕುವುದೆಂದು ಅವನ ನಂಬಿಕೆ. ತನ್ನ ಮತ್ತು ಸಂಸಾರದ ಜೀವನವನ್ನು ಸಂಪಾದಿಸುವುದು ತನ್ನಂತಹ ಎದೆಗಾರಿಕೆಯ ಮನುಷ್ಯನಿಗೆ ದೊಡ್ಡ ವಿಚಾರವೇ? ಎಂದು ಸಮಾಧಾನಮಾಡಿಕೊಂಡನು. 'ಜನ್ಮವಿತ್ತ ದೇವರು ಉಪವಾಸ ಕೆಡಹುವುದಿಲ್ಲ'ವೆಂಬ ಹಳೆಯ ನಂಬಿಕೆಯೊಂದು ಅವನಲ್ಲಿ ದೃಢವಾಗಿ ಮೂಡಿತ್ತು. ಆದರೂ ವ್ಯರ್ಥವಾಗಿ ೮-೯ ವರ್ಷಗಳ ಸೇವಾಫಲವನ್ನು ಕೆಲವು ತುಂಟರ ಚೇಷ್ಟೆಗೆ ತುತ್ತಾಗಿ ಕಳೆದುಕೊಳ್ಳಬೇಕಾಯಿತಲ್ಲಾ ಎಂಬ ವ್ಯಥೆ. ಹೀಗೆಯೇ ಯೋಚನೆಯಲ್ಲಿ ದಾರಿಕಳೆಯುವ ಬೇಸರಿಕೆಯನ್ನು ನೀಗಿಕೊಂಡುಬಿಟ್ಟನು. ಅನತಿದೂರದಲ್ಲಿ ಮನೆಯು ಕಾಣುತ್ತಿತ್ತು. ಮನೆಯ ಒಳ ಅಂಗಳದಲ್ಲಿ ಕುಸುಮಾ ಬಾಯಿಯಲ್ಲಿ ಬೆಳ್ಳಿಯ 'ರಂಗಾಣಿ'ಯನ್ನು ಕಚ್ಚಿಕೊಂಡು, ಅದು ಕೆಳಗೆ ಬಿದ್ದೊಡನೆ ಮತ್ತೆ ಅದನ್ನು ತೆಗೆದು ಬಾಯಿಯಲ್ಲಿಟ್ಟುಕೊಳ್ಳಲಾಗದೆ ಅಳುತ್ತಾ, ತಾಯಿಯು ಹತ್ತಿರ ಬಂದು ಮುದ್ದಾಡಿ 'ರಂಗಾಣಿ'ಯನ್ನು ಬಾಯಿಯಲ್ಲಿಟ್ಟುಹೋದರೆ

ನಗುತ್ತ ಮೊದಲಿನಂತೆ ಆಡುತ್ತಿರುವ ನೋಟವನ್ನು ನೆನೆಯುತ್ತಾ ಮನೆಯ ಬಳಿ ಬಂದನು. ಗಾಡಿಯವನನ್ನು ಕಳುಹಿಸಿ ಒಳಕ್ಕೆ ಮೆಲ್ಲನೆ ತೆರಳಿದನು. ಹೆಂಡತಿ ಮಗುವಿಗೆ ಕಾಣದಂತೆ ಹೋಗಿ ಅವರನ್ನು ಅಚ್ಚರಿಗೊಳಿಸಬೇಕೆಂದು ಹೆಜ್ಜೆಯಮೇಲೆ ಹೆಜ್ಜೆಯ ನಿಕ್ಕುತ್ತಾ ಮೆಲ್ಲಮೆಲ್ಲನೆ ಒಳಕ್ಕೆ ತೆರಳಿದನು. ಸ್ವಲ್ಪ ಹೊತ್ತಾಯಿತು. ಯಾರೂ ಎದುರಿಗೆ ಸುಳಿಯಲಿಲ್ಲ. ಸುಬ್ಬಣ್ಣನ ಮನಸ್ಸಿನಲ್ಲಿ ಏನೋ ಒಂದುತೆರನ ಯಾತನೆಯಾಗತೊಡಗಿತು. ಏನನ್ನೋ ಜ್ಞಾಪಿಸಿಕೊಂಡು ತಟ್ಟನೆ ಎದ್ದು ಘಟ್ಟಿಯಾಗಿ:—

'ಸರಸಾ' ಎಂದು ಕೂಗಿದನು.

ಎರಡು ಮೂರುಬಾರಿ ಘಟ್ಟಿಘಟ್ಟಿಯಾಗಿ ಕೂಗಿದನು.

ಸರಸಮ್ಮ ಬಂದು ಎದುರಿಗೆ ನಿಂತಳು.

ಸುಬ್ಬಣ್ಣನ ಮನಸ್ಸಿನ ದುಗುಡವು ಹೆಂಡತಿಯನ್ನು ಕಂಡು ಸ್ವಲ್ಪ ಕಡಿಮೆಯಾದಂತಾಯಿತು. ವಿರಾಮವಾಗಿ ಕುರ್ಚಿಯಮೇಲೆ ಕುಳಿತು:—

'ಎಲ್ಲಿದ್ದೆಯೇ. ಇಷ್ಟು ಸಲ ಕೂಗಿದರೂ........'

'ಒಳಗೇ ಇದ್ದೆ. ಕಸಮುಸುರೆ ಮಾಡುತ್ತಾ ಇದ್ದೆ.'

'ಮನೆಯಕಡೆ ಎಲ್ಲಾರೂ ಕ್ಷೇಮವೋ?'

'ಹೂ. ಎಂದು ಉಸಿರನ್ನು ಒತ್ತಿಯೊತ್ತಿ ಸರಸಮ್ಮ ಮಾರುತ್ತರವಿತ್ತಳು. ಸುಬ್ಬಣ್ಣನ ಕಿವಿಗಳು ಉದ್ವೇಗದಿಂದ ಆಗಷ್ಟು ಚೇತನಾಪೂರ್ಣವಾಗಿರದಿದ್ದಲ್ಲಿ ಅವಳ 'ಹೂ' ಕೇಳಿಸುತ್ತಲೇ ಇರಲಿಲ್ಲ. ಆದರೆ ಅವನೇನೋ ಒಪ್ಪಿದಾದನು. ಮತ್ತೆ ಮನದ ದುಗುಡ ಮೊದಲಿನಂತೆ ಆರಂಭವಾಯಿತು. ಜೋಡು ತೆಗೆಯುತ್ತಿದ್ದವನು ಹಾಗೆಯೇ ಕತ್ತೆತ್ತಿನೋಡಲು ಸರಸಮ್ಮ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಕಾಣಬಂತು. ಇದ್ದಂತೆಯೇ ಹೆಂಡತಿಯ ಹತ್ತಿರಬಂದು ಆಕೆಯನ್ನು ಹಿಡಿದಲುಗಿಸುತ್ತಾ:—

'ಏನಾಯಿತೇ?—ಯಾತಕ್ಕೆ ಹೀಗಳುತ್ತಿರುವೆ ಬೇಗ ಹೇಳೇ!!—' ಎಂದನು.

ಸರಸಮ್ಮ ಮೆಲ್ಲಮೆಲ್ಲನೆ ಗಂಟಲು ಸರಿಮಾಡಿಕೊಂಡು:—

'ಕುಸುಮಾ........'

'ಹೊ.......ಏನಾಯಿತು........ಹುಷಾರಾಗಿದ್ದಾಳೆಯೋ ಇಲ್ಲವೋ ?' ಕೇಳುತ್ತಿದ್ದವನು ತಂದೆ! ಹೇಳುತ್ತಿದ್ದವಳು ತಾಯಿ!! ವಾರ್ತೆಯಾದರೋ.... ಮಗುವಿನ ಮ....ರ....ಣ....ದ ಕೆಟ್ಟ ಸುದ್ದಿ. ಒಂದೊಂದು ಅಕ್ಷರವಾಗಿ ಹೇಳಿ ಮುಗಿಸಿದಳು. ಸುಬ್ಬಣ್ಣನ ಚೇತನಗಳೆಲ್ಲವೂ ಉಡುಗಿಹೋದವು. ಹಾಗೆಯೇ ಕಾಲುಸೋತು ಕುರ್ಚಿಯಮೇಲೆ ಕುಕ್ಕರಿಸಿಬಿಟ್ಟನು.

೪

ಸುಬ್ಬಣ್ಣನ ಮನೆ ಈಗ ಮನೆಯಲ್ಲ, ಅದು ಒಂದು ಬಗೆಯ ರುದ್ರ ಭೂಮಿ. ಸುಖವಿಲ್ಲದ, ಆಸೆಯಿಲ್ಲದ ಎರಡು ಜೀವ ಶವಗಳು ಬಾಳುವೆಯ ಹೊರೆಯನ್ನು ಅಲ್ಲಿಟ್ಟು ಪೋಷಿಸುತ್ತಿದ್ದವು. ಶವಗಳನ್ನು ಪೋಷಿಸಿ ಜಗತ್ತಿನ ಉದ್ಧಾರಮಾಡಬೇಕೆಂಬ ಹಂಬಲದಿಂದಲ್ಲ....ಶವಗಳನ್ನು ಸಂಸ್ಕಾರಮಾಡಲಾಗದ ಕ್ಷುದ್ರ ಹೃದಯದೌರ್ಬಲ್ಯದಿಂದ. ಬಾಳುವೆಯ ಎಲ್ಲಾ ಸೌಭಾಗ್ಯಗಳನ್ನು ಕಂಡೂ, ವೃದ್ಧಾಪ್ಯವ್ಯಾಪ್ತವಾದಾಗ ಸಾಯಲು ಒಪ್ಪದೆ 'ಮೊಮ್ಮಕ್ಕಳ ಮರಿಮಕ್ಕಳ' ಮುಂಜಿ ಮದುವೆಗಳನ್ನು ನೋಡ ಬಯಸುವ ಪ್ರಾಣಿಗಳು ಉಸಿಗಾಲ ಚಳಿಗಾಲಗಳೆರಡಕ್ಕೂ ಮೃತ್ಯುವನ್ನೇರ್ಪಡಿಸಲೆತ್ನಿಸುವಾಗ ಇನ್ನು ಸುಬ್ಬಣ್ಣ ಸರಸಮ್ಮ ಇವರುಗಳ ಗತಿಯೇನು? ಬಾಳು ಬರಿದಾಗಿದ್ದರೂ ಅದನ್ನು ಹೇಗಾದರೂ ಸಾಗಿಸುವಂತೆ....ಕೆಲವುಸಲ ನಿರ್ದಿಷ್ಟ ಗುರಿಗೆ.... ಕೆಲವುಸಲ ಸನ್ನಿವೇಶಗಳು ಎಳೆದೊಯ್ದಲ್ಲಿಗೆ....ಯಾವುದೋ ಒಂದು ಕಾರಣವು ಪ್ರೇರೇಪಿಸುತ್ತದೆ. ಆ ಕಾರಣವು ಯಾವುದು ? ಎಂಬುದರ ಜಿಜ್ಞಾಸೆಯ ಕಡೆಗೆ ಸುಬ್ಬಣ್ಣನ ಮನವು ವಾಲಿರಲಿಲ್ಲ. ಆದರೆ ಪ್ರಮೇಯದ ಪ್ರಭಾವವು ಮಾತ್ರ ಅವನ ಮೇಲೆ ಪೂರ್ಣಾಧಿಕಾರ ಮಾಡುತ್ತಲಿದ್ದಿತು.

ಹೊಟ್ಟೆಯ ಪಾಡಿನ ಸಮಸ್ಯೆಯು ಈಗ ಮುಂದೆ ಬಂದು ನಿಂತಿತು. ಮೇಲಿನ ಅಧಿಕಾರಿಗಳನ್ನು ಮತ್ತೆ ಮತ್ತೆ ಕಂಡು ಅವರಲ್ಲಿ ತನ್ನ ಮನವಿಯನ್ನು ಹೇಳಿಕೊಂಡು ಅವನಿಗೂ ಸಾಕಾಗಿಹೋಯಿತು. ತನ್ನ ಉದ್ಯೋಗವು ಪುನಃ ದೊರೆಯದಿದ್ದರೂ ಹತ್ತಿರವಿದ್ದ ಪುಡಿಕಾಸುಗಳೂ, ಹೆಂಡತಿಯ ಒಂದೆರಡು ಒಡವೆ ವಸ್ತ್ರಗಳೂ ಮಾಯವಾಗಿ ಹೋದವು. ಹೊತ್ತು ಹುಟ್ಟುವ ಹೊತ್ತಿಗೆ ಹೊರಗೆ ಹೋಗುವುದು–ಸ್ವಾಮಿ ನೆತ್ತಿಯ ಮೇಲೆ ಮೂಡುವ ಹೊತ್ತಿಗೆ ಬೆಂದು, ಬೆಂಡಾಗಿ, ಬೇಸತ್ತ ಮುಖವನ್ನು ಹೊತ್ತು ಬರಿಗೈಯಲ್ಲಿ

ಮನೆಗೆ ಹಿಂದಿರುಗುವುದು. ಸ್ಥಿತಿಗತಿಗಳು ಇಂದು ಮೇಲಾಗುವವು....ನಾಳೆ ಉತ್ತಮಗೊಳ್ಳುವವು ಎಂದು ಕಾದುಕಾದು ಸರಸಮ್ಮನೂ ಬೇಸತ್ತಳು. ಅವಳ ಬೇಸರಿಕೆಯ ಪ್ರಭಾವವು ಮನೆಯಲ್ಲಿ ತಾಂಡವವಾಡತೊಡಗಿತು. ಹೊರಗೆ ಹೋದರೆ ಕೆಲಸವು ಹತಕ್ಕೆ ಹೋಯಿತೆಂದು ಕಂಡು ಕಂಡವರಿಗೆಲ್ಲಾ ಅವರ ಬಣತ್ವಷೆಯನ್ನು ಹಿಂಗಿಸಲು ವರದಿ ಒಪ್ಪಿಸುವುದು! ಮನೆಗೆ ಬಂದೊಡನೆಯೇ ಸಂಪಾದನೆ ಹತಕ್ಕಾಗಲಿಲ್ಲವೆಂದು ಹೆಂಡತಿಗೆ ವರದಿ ಒಪ್ಪಿಸುವುದು!! ಈ ಬಾಳು ಸುಬ್ಬಣ್ಣನ ರಕ್ತವನ್ನು ಮಾತ್ರವಲ್ಲದೆ ಅವನ ಮಾಂಸಖಂಡಗಳನ್ನೆಲ್ಲಾ ಮುಕ್ಕಿ, ಮೂಳೆಯನ್ನೂ ರುಚಿನೋಡಲಾರಂಭಿಸಿತ್ತು.

ಒಮ್ಮೊಮ್ಮೆ ತನ್ನ ಕಷ್ಟವನ್ನು ನೆನೆದು ತಾನೇ ನಗುವನು. ಇಂದೆಂತಹ ಮಹಾಕಷ್ಟ--ಒಪ್ಪೊತ್ತಿಗೆ ಕೂಡ ದಿಕ್ಕಿಲ್ಲದೆ, ನಿಲ್ಲಲು ನೆಲೆಯಿಲ್ಲದೆ ನರಳುವವರಿಲ್ಲನೇ? ಎಂದು ಸಮಾಧಾನಪಟ್ಟುಕೊಳ್ಳುವನು. ಆದರೆ ಹಿಂದೆ ಸುಖವಾಗಿ ಬಾಳಿದ ನೆನಪು ಹೃದಯವನ್ನು ಹಿಂಡಿಬಿಡುತ್ತಲಿತ್ತು. 'ನನ್ನ ಕುಸುಮವೊಂದು ಈಗಿದ್ದಿದ್ದರೆ ಇಂತಹ ನೂರು ಕಷ್ಟಗಳನ್ನು ಮರೆತುಬಿಡುತ್ತಿದ್ದೆ....ಈಗ ಯಾರಿಗಾಗಿ ನಾನು ಬದುಕಬೇಕು. ಯಾರಿಗಾಗಿ ಬಾಳಬೇಕು. ನನ್ನ ಜೊತೆಗೂಡಲ ಕಂಡು ಮರುಗುವರಾರು?' ಎಂದು ದುಃಖಿಸುವನು. ಸುಖವೆಂಬುದು ಬೆಳೆಯನ್ನು ಕಾಣದ ಕಳೆ. ಅದೆಲ್ಲಿ ಹುಟ್ಟುವುದೋ ಅಲ್ಲಿಯೇ ಸಾಯುವುದು. ಆದರೆ ದುಃಖವು ಹಾಗಲ್ಲ. ಹುಟ್ಟಿದಂದಿನಿಂದ ಮನುಷ್ಯನಿಗೆ ತಿಳಿಸದೆ ಅವನನ್ನು ದಿವ್ಯವಾದ ಸ್ವರ್ಗಧಾಮವೊಂದಕ್ಕೆ ಕೈಹಿಡಿದು ಕರೆದೊಯ್ಯುತ್ತಿರುತ್ತದೆ. ದುಃಖದ ದಿನಗಳೆಲ್ಲ ತೀರಿದಮೇಲೆ-ತಂಪೆಸೆವ ನರುಗಾಳಿಯೊಮ್ಮೆ ಬೀಸಿದಮೇಲೆ ಮನುಷ್ಯನೆಚ್ಚೆತ್ತು ತಾನು ಬಂದಿರುವ ತಾವನ್ನು ಕಣ್ದೆರೆದು ನೋಡುತ್ತಾನೆ. ಅಲ್ಲಿಯೂ ದುಃಖಿತರು; ತನ್ನಂತೆಯೇ ದುಃಖಿತರು; ತನಗಿಂತಲೂ ಹೆಚ್ಚಿನ ದುಃಖವನ್ನು ಕಂಡವರು. ಅವರ ಕತೆಗಳನ್ನು ಕೇಳಿ ತನ್ನ ಸ್ಥಿತಿಯನ್ನು ನೋಡಿಕೊಂಡು 'ಭಲೆ, ನಾನೇ ಮೇಲು' ಎಂದು ತನ್ನ ಭುಜವನ್ನು ತಾನೇ ಚಪ್ಪರಿಸಿಕೊಳ್ಳುತ್ತಾನೆ. ದುಃಖದ ಕೆಸರಿನಲ್ಲಿ ಹುಟ್ಟಿದ ಈ ಸುಖಕಮಲದಲ್ಲಿ ತನ್ನ ಸ್ವರೂಪವನ್ನು ತಾನು ಕಂಡುಕೊಳ್ಳುತ್ತಾನೆ. ತನಗರಿವಾಗದಂತೆ ಮನಸ್ಸಿನ ಭೂಮಿಕೆಯಲ್ಲಿ ಬಂದು ನೆಲಸಿದ ಹಲವು ದುಃಖಗಳ.....ಹಲವರ ದುಃಖಗಳ.....ಒಳಹೊರ ಆಕೃತಿಗಳನ್ನು

ಕಂಡು ತೆಗೆದ ಕಣ್ಣನ್ನು ಹಾಗೆಯೇ ಮುಚ್ಚುತ್ತಾನೆ. ಧಾರೆಧಾರೆಯಾಗಿ ಕಂಬನಿಯು ಹರಿಯುವುದು. ಒಂದೊಂದು ಹನಿಯು ಅವನ ಮನವನ್ನು ಒಂದೊಂದಡಿ ಮುಂದೆ ತೆಗೆದುಕೊಂಡು ಹೋಗಿರುತ್ತದೆ. ಆ ಒಳಗಣ್ಣ ನೋಟವನ್ನು ಮುಂದೆ ಚಾಚಿ ತನ್ನ ಸುಖದ ಪಾಲನ್ನು ಇತರರಿಗೆ ಹಂಚ ಹೋಗುತ್ತಾನೆ. ಈ ನಾಟಕವನ್ನೇ ಅಲ್ಲವೆ 'ಲೀಲೆ'ಯೆಂದು ಕರೆಯುವುದು. ಪ್ರಕೃತಿಯ ಲೀಲೆಯೋ--ಪ್ರಕೃತಿಗೂ ಅತೀತವಾದ--ಪ್ರಕೃತಿಗಳಿಗೆ ಜನನವೀಯುವ ಒಂದು ಅಪಾರ, ಅಮಾನುಷ, ಅಗೋಚರಶಕ್ತಿಯ ಪ್ರಭಾವವೋ?

ಸರಸಮ್ಮನ ಆಸೆಗಳೆಲ್ಲಾ ನಿರಾಸೆಯಾಗುತ್ತ ಬಂದವು. ಅವಳಿಗೂ ಸುಬ್ಬಣ್ಣನಿಗೂ ಇದ್ದ ಸಂಬಂಧವೇ ಆ ಆಸೆಗಳ ಬಲವಾದ ಕಟ್ಟು. ಈಗದು ಸಡಿಲವಾಗುತ್ತ ಬಂದಿತು. ಗಂಡನ ಮನೆಯ 'ಭಂಡ ಸಂಸಾರ' ಅವಳಿಗೆ ಬೇಸರವಾಗುತ್ತ ಬಂದಿತು. 'ಇಂದು ಉಪ್ಪಿಲ್ಲ-ನಾಳೆ ತುಪ್ಪವಿಲ್ಲ; ಇಂದು ಒಪ್ಪತ್ತೂಟ, ನಾಳೆ ಉಪವಾಸ' ಎಂದು ಒದರಿ ಒದರಿ ಅವಳಿಗೂ ಸಾಕಾಗಿ ಹೋಗಿತ್ತು. ಕೊನೆಗೆ ತೌರುಮನೆಗೆ ಹೋಗಿಬರುವೆನೆಂದು ಹಟ ಹಿಡಿದಳು; ಸುಬ್ಬಣ್ಣನು ಆಗಲೆಂದು ಅವಳ ತಮ್ಮಂದಿರಲ್ಲಿ ಒಬ್ಬನನ್ನು ಬರಮಾಡಿಕೊಂಡು ಹೆಂಡತಿಯನ್ನು ಕಳುಹಿಸಿಕೊಟ್ಟನು.

೪

ಹೆಂಡತಿಯನ್ನು ಕಳುಹಿಸಿಬಿಟ್ಟು ತಾನು ನಿರಾತಂಕವಾಗಿರಬೇಕೆಂಬುದು ಸುಬ್ಬಣ್ಣನ ಉದ್ದೇಶವಲ್ಲ. ಹೆಂಡತಿಯು ಬರುವ ಅವಧಿಯೊಳಗಾಗಿ ಹೊಟ್ಟೆ ಪಾಡಿನ ಮಾರ್ಗವೊಂದನ್ನು ಹುಡುಕಿ ಮೊದಲಿನಂತೆಯೇ ಅವಳನ್ನು ಸುಖವಾಗಿ ಬಾಳಿಸಿಕೊಂಡು ಬರಬೇಕೆಂಬುದೇ ಅವನ ಆಶಯವಾಗಿದ್ದಿತು.

ಹಗಲು ರಾತ್ರಿಯಾಯಿತು, ರಾತ್ರಿ ಹಗಲಾಯಿತು. ಸ್ವತಂತ್ರ ಜೀವನದ ಸವಿಯನ್ನು ಕಂಡಿದ್ದ ಸುಬ್ಬಣ್ಣನು ಪರಾಶ್ರಯದ ಪಿಂಡವನ್ನಾಶಿಸುವ 'ಕೂಳುಬಾಕ'ನಾದನು. ಸುಬ್ಬಣ್ಣನೀಗ ಮನಸ್ಸಿಟ್ಟು ಒಂದು ಕಾರ್ಯದಲ್ಲಿ ತೊಡಗುವ ಮನುಷ್ಯನಲ್ಲ. 'ಅನ್ನದ ದೇವರ' ಹೆಸರಿನಲ್ಲಿ ದುಡಿಯುವ ಒಂದು ಯಂತ್ರ. ತನ್ನ ಉದರದ ಭೀಷಣಜ್ವಾಲೆಯನ್ನು ಹಾಗೆಯೇ ಮೆಲ್ಲ ಮೆಲ್ಲನೆ ನೊಂದಿಸುತಲಿದ್ದ. ಆದರೆ ತನ್ನ ನೆರೆನಂಬಿದ ಹೆಂಡತಿಯ ಸುಖದ

ನೆನಪು ಅವನ ಕಿಚ್ಚನ್ನು ಕೆರಳಿಸಿ ಘೋಕರುನ್ಮಾದದಿಂದುರಿಯುವಂತೆ ಮಾಡುತ್ತಲಿತ್ತು. ತನ್ನ ದೇಹವನ್ನು 'ಧನಪಿಶಾಚ'ಕ್ಕೆ ಮಾರಲು ಸಿದ್ಧನಾಗಿದ್ದ.... ಆದರೆ ಕೊಳ್ಳುವ ವರ್ತಕರಿಲ್ಲದೆ ಹೋಯಿತು.

ಆಯತಪ್ಪಿದ ಈ ಅಲೆದಾಟವು ಚಂಡಮಾರುತಕ್ಕೆ ಸಿಕ್ಕಿದ ಬಡದೋಣಿಯನ್ನು ಸಾಗರವು ಕುಲುಕುಲುಕಿ ಒಂದು ದಡಕ್ಕೆಸೆಯುವಂತೆ ಸುಬ್ಬಣ್ಣನನ್ನು ಯಾವುದೋ ಒಂದು ದಡದೆಡೆಗೆ ತೇಲಿಸುತ್ತಿರುವಂತೆ ತೋರಬಂದಿತು.

ಒಂದುದಿನ ಸಂಧ್ಯಾಕಾಲ ತನ್ನ ದಿನಚರಿಯನ್ನು ಮುಗಿಸಿಕೊಂಡು ಸುಬ್ಬಣ್ಣನು ಚಂಡಿಹಿಡಿಯುತ್ತಿದ್ದ ಕಾಲನ್ನೆಳೆದುಕೊಂಡು ಕಣ್ಣು ಆಸ್ಪತ್ರೆಯ ಮುಂದಿನ ರಸ್ತೆಯಲ್ಲಿ ಮನೆಯ ಕಡೆಗೆ ಸಾಗುತ್ತಲಿದ್ದಾನೆ. ಗಾಂಧಿಯ ಮೈದಾನದಲ್ಲಿ, ಎತ್ತರವಾದ ಮೇಜಿನಮೇಲೆ ಕುಳಿತು ಒಬ್ಬ ತೇಜಸ್ವಿಯಾದ ತರುಣನು ವ್ಯಾಖ್ಯಾನಮಾಡುತ್ತಲಿದ್ದ. ವ್ಯಾಖ್ಯಾನಕಾರನ ಮುಖದ ತೇಜಸ್ಸು ಸುಬ್ಬಣ್ಣನನ್ನಾಕರ್ಷಿಸಿತು. ತುಂಬು ಪ್ರಾಯ. ತಿದ್ದಿದ ಮುಖಲಕ್ಷಣ, ತೇಜಃಪುಂಜವಾದ ಕಣ್ಣುಗಳು. ಗಂಭೀರವಾದ ಮುಖಭಾವ....ಇವುಗಳ ಜೊತೆಗೆ ಸಾಕ್ಷಾತ್ ವಾಗೀಶ್ವರಿಯೇ ಪೀಠಸ್ಥಳಾಗಿ ತನ್ನ ಅಸ್ಖಲಿತ ವಾಣಿಯಿಂದ ವ್ಯಾಖ್ಯಾನಮಾಡುತ್ತಿರುವಳೋ ಎನ್ನುವಂತಹ ಓಜಸ್ವಿತೆ. ಇವುಗಳಿಂದಾಕರ್ಷಿತನಾಗಿ ಭಾಷಣಗಾರನ ವಾಕ್ಸುಧೆಯನ್ನು ಸವಿಯುತ್ತ ಕ್ಷಣಕಾಲ ನಿಂತನು........ಸ್ವಲ್ಪ ಹೊತ್ತಾಯಿತು........ಹಾಗೆಯೇ ದಾರಿಮಾಡಿಕೊಂಡು ಹೋಗಿ, ಮುಂದೆ ಮೇಜಿನ ತಳದಲ್ಲಿ ಭಾಷಣಗಾರನ ಮುಂದೆ ಕುಳಿತನು. 'ಹಿಂದೂಸ್ಥಾನದ ದಾರಿದ್ರ್ಯ'ವನ್ನು ಕುರಿತು ವ್ಯಾಖ್ಯಾನಕಾರನು ಕಟುತರ ಭಾಷಣದಿಂದ ವಾಚಕರನ್ನು ಅಚ್ಚರಿಗೊಳಿಸುತ್ತಲಿದ್ದಾನೆ. ಹಿಂದೂಸ್ಥಾನದ ಇಂದಿನ ಆರ್ಥಿಕ, ನೈತಿಕ, ಲಲಿತಕಲಾ ದಾರಿದ್ರ್ಯ ದೆಸೆಯನ್ನು ಮನಮುಟ್ಟುವಂತೆ ಬಣ್ಣಿಸುತ್ತಿದ್ದುದು ಸುಬ್ಬಣ್ಣನಿಗೆ 'ಹಾಯ್' ಎನ್ನುವಂತೆ ಮಾಡಿತು. ಭಾಷಣಗಾರನು ಸಂಸಾರ, ದಾಂಪತ್ಯ, ಪ್ರಾಪಂಚಿಕ ಬಂಧನ, ಆಸೆ ನಿರಾಸೆಗಳು ಮುಂತಾದ ವಿಚಾರಗಳ ವಿಷಯದಲ್ಲಿ ಪ್ರಾಸಂಗಿಕವಾಗಿ ಮಾಡಿದ್ದ ಟೀಕೆಗಳೆಲ್ಲವೂ ಸುಬ್ಬಣ್ಣನ ಶುಷ್ಕ ಮನದಲ್ಲಿ ಮನೆಮಾಡಿಬಿಟ್ಟವು. ವ್ಯಾಖ್ಯಾನಕಾರನ ಪರಿಚಯವನ್ನು ಮಾಡಿಕೊಂಡು, ಅಂದಿನಿಂದ ಸುಬ್ಬಣ್ಣನೂ ಅವನ ಶಿಷ್ಯಕೋಟಿಗೆ ಸೇರಿದವನಾದನು.

ತರುಣಜ್ಞಾನಿಯ ಕಿರಣಗಳು ಸುಬ್ಬಣ್ಣನ ಮನದಲ್ಲಿ ಮುಸುಕಿದ್ದ ಮೋಡಗಳನ್ನು ಚೆದುರಿಸುತ್ತ ಬಂದವು. ಅಂದಿನಿಂದವನ ಕಣ್ಣುಗಳು ಶುಭ್ರವಾಗಿ ಕಾಣುತ್ತ ಬಂದವು. 'ಪ್ರಪಂಚವೆಂದರೆ ಪಾಪದ ಕೂಪವಲ್ಲ, ಶೋಕದ ತೌರೂರಲ್ಲ. ದುಃಖವೇನೋ ತುಂಬಿದೆ; ಆದರೆ ಸೌಖ್ಯವೂ ಇದೆ. ಸುಖದ ಬೆಳಕನ್ನು ಎಲ್ಲ ಮನೆಗಳಲ್ಲಿಯೂ ಬೆಳಗಿಸಿ ಬರಬೇಕು. ಆನಂದದ ಲಾಸ್ಯವು ಎಲ್ಲರ ಮುಖದಲ್ಲಿಯೂ ರಾರಾಜಿಸುವಂತೆ ಮಾಡಬೇಕೆಂಬ ಆಸೆ ಹುಟ್ಟಿತು.' ಅದರೊಂದಿಗೆ ಇರಬೇಕು—ಬಾಳಬೇಕು—ಬದುಕಬೇಕೆಂಬ ಭಾವನೆಯೂ ಬೆಳೆಯಿತು. ಹೆಂಡತಿಯಲ್ಲಿಯೇ ಸಕಲ ತೃಪ್ತಿಯನ್ನೂ ಹೊಂದಿ ತಟಸ್ಥನಾಗಬೇಕೆಂದಿದ್ದವನು ಹೆಂಡತಿಯೆಂದರೆ ಜಗತ್ತಿನ ಒಂದು ಅಂಶ, ಅವಳನ್ನು ಕೇಂದ್ರಸ್ಥಾನವಾಗಿಟ್ಟುಕೊಂಡು ಜಗತ್ತಿನ ಸುಖದಲ್ಲ ದುಃಖದಲ್ಲಿ ಸಮಭಾಗಿಯಾಗಬೇಕು ಎಂಬ ನಿರ್ಧಾರಕ್ಕೆ ಬಂದನು.

ಈ ಆಶಾಮಯ ನಿರ್ಧಾರದೊಂದಿಗೆ ಬದುಕಿನ ಬೆಬ್ಬಳವೂ ಕಡಿಮೆಯಾಯಿತು. ಸುಖದಿವಸಗಳ ಮಿಂಚಿನ ಬಕ್ಕಿಗಳು ಸುಳಿಯಲಾರಂಭಿಸಿದವು. ಗಳಿಸಬೇಕೆಂಬ ಆಸೆಯೇನೋ ಅಚ್ಚಳಿಯಲಿಲ್ಲ. ಆದರೆ ಗಳಿಸಿದುದನ್ನು ಎಲ್ಲರಲ್ಲಿಯೂ ಚೆಲ್ಲಬಿಡಬೇಕೆಂಬ ಬಯಕೆ ಬಂದು ಸೇರಿಕೊಂಡಿತು. ಒಂದು 'ಜೀವವಿಮಾ ಕಂಪನಿ'ಯ ಏಜನ್ಸಿ ಸುಬ್ಬಣ್ಣನ ಕರಗತವಾಯಿತು. ಅದರಿಂದ ಅವನ ಭವಿಷ್ಯವೂ ದಿನೇದಿನೇ ಉತ್ತಮವಾಗತೊಡಗಿತು. ಕಂಪನಿಗೆ ಸುಬ್ಬಣ್ಣನಿಂದ ವಿಶೇಷ ಪ್ರಯೋಜನವಾಗತೊಡಗಲು ಸುಬ್ಬಣ್ಣನಿಗೂ ಒಂದು ಭಾಗವು ಸಿಕ್ಕಲಾರಂಭವಾಯಿತು. ಕೆಲತಿಂಗಳು ಕಳೆಯುವುದರೊಳಗಾಗಿ ಸುಬ್ಬಣ್ಣನೆಂದರೆ ಊರಿನ ಒಬ್ಬ ಗಣ್ಯ.......ಗುಣಾಢ್ಯ ಮನುಷ್ಯನೆಂಬ ಕೀರ್ತಿಯು ಪಸರಿಸಿತ್ತು.

ಆದರೆ ಇಂದಿನ ಸುಬ್ಬಣ್ಣ ಮೊದಲಿನ ಸುಬ್ಬಣ್ಣನಲ್ಲ. ತನಗಾಗಿ—ತನ್ನ ಹೆಂಡತಿಗಾಗಿ ಮಾತ್ರವೇ ಜೀವಿಸುತ್ತಿದ್ದ ಮೊದಲಿನ ಲೋಭಿಯಲ್ಲ, ಇಂದಿನ ಸುಬ್ಬಣ್ಣನ ಮನಸ್ಸು ಕೃಷ್ಣಪಕ್ಷದ ಚಂದ್ರನ ಕ್ಷಯವನ್ನು ಕುರಿತು ಪರಿತಾಪಪಡುವವರಿಗೆ ಹೋಗಿತ್ತು. 'ಅಯ್ಯೋ!' ಎನ್ನುವ ಆರ್ತಧ್ವನಿ ಇಲ್ಲದಂತೆ ಮಾಡಿಬಿಡಬೇಕೆಂದು ಅವನ ಸಂಕಲ್ಪ. ಬಡವರ ಬಂಧು—ದೀನರ....ಆರ್ತರ....ನೊಂದವರ ಸಖನೆಂದರೆ ಸುಬ್ಬಣ್ಣ.

ಹೆಂಡತಿಯನ್ನು ತೌರುಮನೆಯಿಂದ ಕರೆಸಿಕೊಂಡು, ಅವಳೊಂದಿಗೆ ಮತ್ತೆ ಸಂಸಾರವನ್ನು ಹೂಡಿ-ಹೊಸಹುರುಪಿನಿಂದ ದಾಂಪತ್ಯ ಜೀವನವನ್ನು ಆರಂಭಿಸಿದ. ಹೊರಗಿನ ಎಲ್ಲಸುಖದ ಮಧ್ಯೆ ಹೆಂಡತಿಯನ್ನು ನೋಡಿದಾಗ ಲಿಲ್ಲಾ ತನ್ನ ಮುದ್ದು 'ಕುಸುಮ'ನನ್ನು ಜ್ಞಾಪಿಸಿಕೊಳ್ಳುತ್ತಿದ್ದ. 'ಇಂದವ ಳಿದ್ದಿದ್ದರೆ' ಅಂದುಕೊಳ್ಳುವನು. ಆದರತ್ತನೋಡಿದರೆ 'ನಿಶ್ಚಿಂತಳಾಗಿದ್ದ ಸರಸನ ಯಥಾರೀತಿಯ ಆಸೆ ಅಭಿರುಚಿಗಳು. ನಿಜವಾಗಿಯೂ ಸರಸನೇ ನನ್ನ ಕುಸುಮನನ್ನು ಹೆತ್ತಳೇ'...........'ಹಾಗಾದರೆ ಒಮ್ಮೆಯೂ ಮಗಳ ವಿರಹವನ್ನು ನೆನೆದವಳು ಮರುಗುವುದಿಲ್ಲವೇತಕ್ಕೆ ?' ಎಂದು ಚಿಂತಿಸುವನು. ತಾಯಿಯಾಗಿಯೂ ತಾಯಿಯ ಒಡಲನ್ನು ಪಡೆಯದಿದ್ದ ಸರಸಮ್ಮನ ಮನ ಸ್ಸಿನ ರಚನೆಯ ತೊಡಕನ್ನು ಸುಬ್ಬಣ್ಣನು ಬಿಡಿಸದಾದನು.

ಹಿಂದಿನ ಜೀವನವನ್ನೇ ಮತ್ತೆ ಆರಂಭಿಸಲು ಸುಬ್ಬಣ್ಣನ ಅಂತರಂಗವು ಒಪ್ಪದು. ಬೇರೆಬಗೆಯ ಜೀವನವು ಸರಸಮ್ಮನಿಗಾಗದು. ಹೆಂಡತಿಯ ಮನಸ್ಸು ಕ್ಷುಲ್ಲವಾದ ತಿಂಡಿತಿನಿಸುಗಳು, ಒಡವೆವಸ್ತ್ರಗಳು, ಪರದೂಷಣೆಯ ವಿಷವರ್ತುಲಗಳನ್ನು ಬಿಟ್ಟು ಹೊರಗೆ ಬರಲೆಂದು ಅವಳಿಗೆ ಲಲಿತಕಲೆಗಳ ಶಿಕ್ಷಣವನ್ನು ಕೊಡಿಸತೊಡಗಿದನು. ಇಂದು ಚಿತ್ರದ ಕೆಲಸ-ನಾಳೆ ಕಸೂತಿ-ನಾಳಿದ್ದು ಸಂಗೀತ-ಕೊನೆಗೆ 'ಯಾವದೂ ಬೇಡಾಂದರೆ-ಎಲ್ಲಿಯ ರಾಮಾ ಯಣ' ಎಂದು ಕೊನೆಗಂಡುಬಿಟ್ಟಿತು. ತಾನು ಹೋಗುತ್ತಿದ್ದ ನಾಟಕ, ಸಿನೀಮಾ, ಉಪನ್ಯಾಸಗಳು ಮುಂತಾದೆಡೆಗಳಿಗೆಲ್ಲಾ ಹೆಂಡತಿಯನ್ನು ಬಿಡದೆ ಎಳೆದೊಯ್ಯುತ್ತಿದ್ದನು. ಕೆಲ ತಿಂಗಳಾದಮೇಲೆ ಅವೂ ಅವಳ ಪ್ರತಿರೋಧ ದಿಂದ ನಿಲ್ಲುತ್ತಾ ಬಂದವು.

ಮೊದಲು ಯಾವ ಹೆಂಡತಿಯಲ್ಲಿ ಸಂಪೂರ್ಣ ತೃಪ್ತಿಯನ್ನು ಸುಬ್ಬಣ್ಣನು ಪಡೆಯುತ್ತಿದ್ದನೋ ಅದೇ-ಅವಳೇ ಹೆಂಡತಿ ಅಲ್ಲೇ ಇದ್ದಳು. ಅವಳಲ್ಲಿ ಯಾವ ಮಾರ್ಪಾಟೂ ಆಗಿರಲಿಲ್ಲ. ಮೊದಲವಳು ಯಾವ ಸುಖವನ್ನು ಕೊಡುತ್ತಿದ್ದಳೋ ಅದನ್ನೇ ಈಗಲೂ ಕೊಡಬಲ್ಲವಳಾಗಿದ್ದಳು....ಕೊಡಲಾ ತುರಳಾಗಿದ್ದಳು. ಆದರೆ ಆ ಸುಖವನ್ನು ಪಡೆಯಲು ಆ ಜೀವನವನ್ನು ನಡೆಸುತ್ತಿದ್ದ ಸುಬ್ಬಣ್ಣ ಮಾತ್ರವಿರಲಿಲ್ಲ. ಅವಳು ಸುಖವನ್ನು ಕೊಡಲಾತುರ

ಕಾಗಿದ್ದಳು....ಆದರೆ ಅದನ್ನು ಸ್ವೀಕರಿಸಲು ಅವನು ಸಿದ್ಧನಾಗಿರಲಿಲ್ಲ. ಅವಳ ಸುಖವು ಸ್ಥಾಯಿಾಭಾವದಲ್ಲಿಯೇ ತೇಲುತ್ತಿತ್ತು. ಅವನಿಗೀಗ ಆ ಸುಖದಲ್ಲಿ ಆಕ್ಕರೆಯಿಲ್ಲ. ಚಿರಸ್ಥಾಯಿಯಾದ....ಅವಿನಾಶಿಯಾದ....ನಾಳೆ ತಾನೂ ಸರ ಸನೂ ಬೆಂದು ಬೂದಿಯಾದ ಮೇಲೂ ಉಳಿಯುವಂತಹ ಸುಖದ ಕಡೆಗೆ ಅವನ ವೈಸ್ಯದಿಂದ ಕೈನೀಡಿದ್ದನು. ವಿನಯದಿಂದ ಅವನು ಆ ಸುಖದ ಸೇವೆಯಲ್ಲಿ ದೀಕ್ಷಾಬದ್ಧನಾಗಿದ್ದನು. ಅವಳು ಶೀತಲವಾದ ಹಿಮವತ್ಪರ್ವತ ವನ್ನು ತನ್ನ ಅಚಲತೆಯಲ್ಲಿ ಮೀರಿಸುತ್ತ ಗಂಡನ ಕಡೆಯಿಂದ ಮುಖವನ್ನು ತಿರುಗಿಸಿಬಿಟ್ಟಿದ್ದಳು.

ಅಷ್ಟೇ ಅಲ್ಲ! ಅವನ ನಡತೆಯಲ್ಲಿ ಅವಳಿಗೆ ಬಗೆಬಗೆಯ ವಿನೋದ ದೊರಕಲಾರಂಭವಾಯಿತು. ಅವನ ಗುರುಪರಂಪರೆಯು ಅವಳ ಊಳಿಗದಾ ಳುಗಳಿಗಿಂತಲೂ ಹೀನರು. ಅವನ ಕನಸು ಕಣಸುಗಳು ಅವಳಿಗೆ ' ನೋಡ ಮ್ಮ. ನಮ್ಮ ಯಜಮಾನರು ಈಚೆಗೆ ಏನೋ ಒಂದು ಥರ ಹುಚ್ಚುಹುಚ್ಚಾಗಿ ಆಡ್ತಾರೆ ಕಣೇ ' ಎನ್ನುವುದಕ್ಕೆ ಒಂದವಕಾಶ ಕಲ್ಪನೆ ಮಾಡುತ್ತಿದ್ದವು. ಜೀವನ ರಥಕ್ಕೆ ಗಂಟುಬಿದ್ದಿದ್ದ ಅಶ್ವಗಳೆರಡೂ ಒಂದೊಂದು ಒಂದೊಂದು ಕಡೆಯಲ್ಲಿ ಎಳೆಯಲಾರಂಭಸಿದ್ದವು. ಈ ವಿನೋದವನ್ನು ನೋಡುತ್ತಾ ರಥವು ನಿಂತಲ್ಲಿಯೇ ನಿಂತಿತ್ತು.

೫

ಒಂದು ರಾತ್ರಿ. ವಸಂತ ಪೌರ್ಣಿಮಾ ರಾತ್ರಿ. ನೀಲಗಗನವನ್ನು ಅಲಂಕರಿಸಿದ್ದ ತಾರೆಗಳ ಗಣವನ್ನು ಅಪ್ಪಿಕೊಂಡು ಜಗತ್ತಿನ ವಿವಿಧ ವ್ಯಾಪಾರ ಗಳನ್ನು ನೋಡುತ್ತಾ ನಗುತ್ತಿದ್ದ ಚಂದ್ರಮನ ಉದ್ದೀಪಕ ನಗು. ಜೀವನದ ದೂಢಿ ಸೌಖ್ಯದ ಕಡೆಗೆ ಬೆರಳುತೋರಿಸುವ ವಿಲೋಭನೆ. ಎತ್ತನೋಡಿದರೂ ಮನಸ್ಸಿನ ಬೆಳಕಿನ ಮೇಲೆ ತೆರೆಯನ್ನೆಳೆಯುವ ಒಳಸಂಚಿನ ಗುಟ್ಟಿನ ದನಿ. ಒಂದೆಡೆಯಲ್ಲಿ ನಿಶಾರಾಣಿಯ ಸೌಗಂಧದ ಸಂಭ್ರಮ. ಈ ಎಲ್ಲ ಉದ್ದೀಪನ ಗಳೊಂದಿಗೆ ವಯಸ್ಸಿನ-ತಾರುಣ್ಯದ-ತೃಪ್ತಜೀವನದ ತುಂಟಬೋಧನೆ. ಆ ಬಗೆಯ ಜೀವನವನ್ನು ಕೊನೆಗಾಣಿಸಬಿಡಬೇಕೆಂದು ಸುಬ್ಬಣ್ಣನು ಮಾಡಿದ್ದ ಶಪಥವನ್ನು ಜ್ಞಾಪಿಸಿಕೊಳ್ಳುತ್ತಿದ್ದನು. ಅದಕ್ಕೆ ಕಣ್ಣುಲ್ಲಿದ್ದ ನೀಳ್ಯವನ್ನೊ

ಮರೆತು ಮನೆಯ ಪಡಸಾಲೆಯಲ್ಲಿ ಶತಪಥ ತಿರುಗುತ್ತಿದ್ದನು. ಹೃದಯ ದೌರ್ಬಲ್ಯದ ಎಳೆತವೊಂದುಕಡೆಯಲ್ಲಿ; ಪೂರ್ವಾಪರ ವಿಚಾರಗಳ ಸಮಸ್ಯೆಯ ಕಿಡಿಗಣ್ಣ ನೋಟವೊಂದೆಡೆಯಲ್ಲಿ........ಈ ಮಧ್ಯೆ ಬಡಸುಬ್ಬಣ್ಣ. 'ಚಿತೆ ಹೆಣವನ್ನು ಸುಟ್ಟರೆ ಚಿಂತೆ ಜೀವಂತ ಮನುಷ್ಯನನ್ನೇ ಸುಡುವುದು' ಎಂಬ ನಾಣ್ಣುಡಿಯನ್ನು ನೆನೆದು ಮರೆಯಲೆತ್ನಿಸಿದನು. ಆರುತಿಂಗಳ ಹಿಂದಿನ ಜೀವನವನ್ನು ನೆನೆದು ಅಂದಿನ-ಇಂದಿನ ವ್ಯತ್ಯಾಸವನ್ನು ತೂಗಿ ನೋಡಿ ಕೊಂಡನು. ಈ ಬಗೆಯ ವಿಡಂಬನೆಗಳು ಮನಸ್ಸಿಗೆ ಒಡಂಬಡದಾದವು.

* * * * * *

ಸರಸಮ್ಮ ಹಾಸಿಗೆಯಮೇಲೆ ಮಲಗಿ ನಿದ್ರಾವಶಳಾಗಿದ್ದಾಳೆ. ಕೇಶ ರಾಶಿಯು ಚದುರಿ, ಭಯಭ್ರಾಂತಗೊಂಡಂತೆ ಮನಸ್ಸು ಬಂದತ್ತ ಹಾರಿ ಹೋಗಿವೆ. ಬೆವರಿನಾವರಣವೊಂದು ಅವಳ ಮುಖಕ್ಕೊಂದು ಬಗೆಯ ಭೀಭತ್ಸಾಕೃತಿಯನ್ನಿತ್ತಿದೆ. ಅರೆತೆರೆದ ಬಾಯಿಂದ ಬಿಸಿಯುಸಿರು ಒಂದು ಬಗೆಯ ಮನೋವೇದಕ ನಾದವನ್ನು ಮಾಡುತ್ತಾ ಹೊರಬರುತ್ತಲಿದೆ. ಮಲ ಗಿದ್ದ ರೀತಿಯಲ್ಲಿ ದೇಹವು ಕರುಟಲುಬಿದ್ದ ಹೀರೆಯ ಬಳ್ಳಿಯಂತೆ ವಕ್ರಾಕಾರ ವನ್ನು ತಾಳಿಕೊಂಡಿದೆ. ಈ ಆಕೃತಿಯನ್ನು ನೋಡುತ್ತಾ, ಭಯಚಕಿತ ನಾದಂತೆ ಬೆವರ್ಗನಿಗಳನ್ನೊರೆಸಿಕೊಳ್ಳುತ್ತಾ ಅವಳ ಮುಂದೆ ಸುಬ್ಬಣ್ಣ ನಿಂತಿ ದ್ದಾನೆ. ಮೆಲ್ಲಮೆಲ್ಲನೆ ಬಂದು ಅವಳ ಬಳಿ ಕುಳಿತು ಭುಜದಮೇಲೆ ಕೈಹಾಕಿ ದ್ದಾನೆ. ತಕ್ಷಣವೇ ಮನಸ್ಸನ್ನು ಯಾವದೋ ವಿದ್ಯುಚ್ಛಕ್ತಿಯು ಇರಿದಂತಾ ಗಲು ಬಿಟ್ಟು ಭಯಗ್ರಸ್ಥನಾಗಿ ಹೊರಬಾಗಿಲಿಗೆ ಬಂದುನಿಂತನು.

* * * * * *

ಸ್ವಲ್ಪಹೊತ್ತಿನತನಕ ಆ ಭಯದ ಕಳವಳವು ಹೋಗಲಿಲ್ಲ. ಅನಂತರ ಬೇರೆ ಭಾವನೆಯು ಮನಸ್ಸಿನಲ್ಲುಲಿದು ಭಯದ ಕಳವಳವನ್ನು ಹೊರದೂ ಡಿತು. ಸುಬ್ಬಣ್ಣನಿಗೆ ಒಂದು ಬಗೆಯ ಚಿಂತೆ....ನಾಚಿಕೆ. ತನ್ನ ಮುಖ ವನ್ನು ತಾನೇ ನೋಡಿಕೊಳ್ಳಲಾಗದಂತಹ ಧಿಕ್ಕಾರಭಾವ. 'ಇಂತಹ ಅಪರಿ ಶುದ್ಧ ಮನಸ್ಸು ನನ್ನದು....ಇನ್ನವಳನ್ನು ಹೇಗೆ ಮುಂದಕ್ಕೆ ತರಬಲ್ಲೆ' ಎಂದಂದುಕೊಂಡನು. 'ನಾನು ಅರಿತಿರುವೆ-ನುರಿತಿಲ್ಲ. ಅವಳು ಅರಿತೂ

ಇಲ್ಲ-ನುರಿತೂ ಇಲ್ಲ' ಎಂದು ಅವನೇ ಸ್ಪಷ್ಟೀಕರಿಸಿಕೊಂಡನು. 'ಇದೇ ನನ್ನ ಪರೀಕ್ಷೆ. ಇದನ್ನು ಗೆಲಿದ ಹೊರತೂ ಗತ್ಯಂತರವಿಲ್ಲ—ಆಗಲಿ....... ಅದನ್ನೂ ನೋಡುವ' ಎಂದು ಧೈರ್ಯಮಾಡಿಕೊಂಡೆದ್ದನು. ಆಗ ಅವನ ಮನಸ್ಸಿನಮೇಲೆ ಒಂದು ಶಾಸನವು ಪ್ರಚಂಡ ಪ್ರಭೆಯಿಂದ ಪ್ರಜ್ವಲಿಸುತ್ತಿತ್ತು. ಅದನ್ನು ನೋಡಿ ತಿರಸ್ಕಾರದಿಂದ:—

'ಕ್ಷುದ್ರಂ ಹೃದಯ ದೌರ್ಬಲ್ಯಂ' ಎಂದಂದು ಕತ್ತೆತ್ತಿ ನೋಡಿದ. ಅದೇ ಚಂದ್ರಮನು....ಅದೇ ನಗೆಯಿಂದ ತನ್ನನ್ನೇ ನೋಡುತ್ತಿದ್ದುದನ್ನು ಗ್ರಹಿಸಿ ನಾಚಿಕೆಯಿಂದ ತಲೆಬಗ್ಗಿಸಿ ಮನಸ್ಸಿನಲ್ಲಿಯೇ:—

'ಜಗನ್ಮಾತೆ, ಶಕ್ತಿಮಯೀ, ಈ ಕ್ಷುದ್ರಹೃದಯದಲ್ಲಿ ಶಕ್ತಿಯನ್ನು ತುಂಬು.'

ಎಂದು ಪ್ರಾರ್ಥಿಸಿ....ತೃಪ್ತಿಯ ಉನ್ನತವಿಲಾಸದಿಂದೊಮ್ಮೆ ಮುಗುಳ್ನಗೆ ನಕ್ಕು ಒಳಕ್ಕೆ ತೆರಳಿದನು.

———o———

# ರಮಾ

—:—

## ೧

ವಾಸುವಿನ ಮನಸ್ಸು ಅವನಿಗೇ ಗೊತ್ತು. ಗುಂಡನಿಗೂ ಸ್ವಲ್ಪಸ್ವಲ್ಪ ಗೊತ್ತಿತ್ತು; ಆದರೆ ಪುಟ್ಟೂರಾಯರ ಪ್ರಭಾವದ ಮುಂದೆ ಯಾರ ಬೇಳೆಯೂ ಬೇಯುವ ಹಾಗಿರಲಿಲ್ಲ. ಪುಟ್ಟೂರಾಯರು ಮಾಡಿದ್ದೊಂದು ರೆವಿನ್ಯೂ ಹೆಡ್ ಗುಮಾಸ್ತೆಯೇ ಆಗಿರಬಹುದು. ಮುಖ್ಯ ಹಣೇಬರಹಾಂತ ಅನ್ನಬೇಕಲ್ಲವೇ ಎಲ್ಲಾ ವಿಚಾರಗಳಿಗೂ. ಕಲ್ಲುಗುಂಡಿನ ಹಾಗಿದ್ದ ಮನುಷ್ಯನ್ನ ಅಮಲ್ದಾರಿಗೆ ಸರಿಸದೆ ಯಾವನೋ ಒಬ್ಬ ಪೋಕರಿ ಹುಡುಗ ಮುದ್ದ ಎಳೇ ನಿಂಬೇಕಾಯಿ-'ಎಂ. ಸಿ. ಎಸ್.,ನಲ್ಲಿ ಡುಮುಕಿ ಹೊಡೆದೋನು' ಅವನಿಗೆ ಅಮಲ್ದಾರಿ ಪಟ್ಟ ಕಟ್ಟಿ ರಾಯರಿಗೆ ಸರ್ಕಾರದವರು ಹಾಗೆ ಅವಮಾನಮಾಡಬಹುದೇ? 'ಹಾಳು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದು ತಪ್ಪಾಯ್ತು' ಎಂದಂದುಕೊಂಡು ರಾಯರು ಸಮಾಧಾನಮಾಡಿಕೊಂಡಿದ್ದರು.

ಅವರಿಗಿದ್ದೋನು ಒಬ್ಬನೇ ಮಗ. ರಾಯರ ದರ್ಪಕ್ಕಿಂತಲೂ ರಾಯರ ಹೆಂಡತಿಯ ಸರಳಸೌಜನ್ಯವೇ ವಾಸುವಿನಲ್ಲಿ ಎದ್ದು ಕಾಣುತ್ತಿದ್ದ ಗುಣವೆಂದರೆ ತಪ್ಪಾಗದು. ರಾಯರ ಮತ್ತು ಅವರ ಕುಟುಂಬದ ಪ್ರಾಣವಿದ್ದದ್ದು ವಾಸುವಿನಲ್ಲಿ. ಅವನು ಮುಂದಕ್ಕೆ ಒಂದು 'ದೊಡ್ಡ ಚಾಕರಿ' ಮಾಡಿಕೊಂಡು ನಾಲಕ್ಕುಜನ ಅಸ್ತು ಅನ್ನುವಹಾಗೆ ಇದ್ದುಬಿಟ್ಟರೆ ಸಾಕೆನ್ನುವುದೇ ಅವರಿಬ್ಬರ ಇಚ್ಛೆಯೂ ಆಗಿತ್ತು.

ವಾಸುವಿಗದು ಡಿಗ್ರಿಪರೀಕ್ಷೆಗೆ ಕಟ್ಟುವ ವರುಷ. ತನ್ನ ಶಕ್ತಿ ಉತ್ಸಾಹಗಳನ್ನೆಲ್ಲಾ ನಿವೇದಿಸಿ ಆ ವರ್ಷ ಎಲ್ಲರಿಗೂ ಹೆಚ್ಚಾಗಿ ಜಯಶಾಲಿಯಾಗಿ ಬರಬೇಕೆಂದು ತೀರ್ಮಾನಿಸಿಕೊಂಡಿದ್ದ. ಅದಕ್ಕಾಗಿಯೇ ನಾಲ್ಕು ವರ್ಷಗಳಿಂದ ತಡೆದಿದ್ದ ಮದುವೆಯ ಪ್ರಯತ್ನ ಆಗಲೂ ಬೇಡವೆಂದು ಅವನ ಹಟ. ರಾಯರೂ ಮಗನ ನಾಲ್ಕುವರ್ಷದ ಜಗ್ಗಾಟವನ್ನು ಸಹಿಸಿದರು; ಈಗ ತಾವು ಬಗ್ಗುವ ಕಾಲವೆಂದು ನಿರ್ಣಯಿಸಿಬಿಟ್ಟರು. ಈ ನಿರ್ಣಯಕ್ಕೆ ಕಾರಣವಿಲ್ಲ

ದಿಲ್ಲ. ರಾಯರ ದೂರದ ಸಂಬಂಧದವರೊಬ್ಬರು-ಮೈಸೂರಿನ ಡಾಕ್ಟರು-ವಾಸುವಿನ ಮತ್ತು ತಮ್ಮ ಮಗಳ ಜಾತಕ ನೋಡಿಸಿ 'ದಿವ್ಯವಾಗಿ ಹೊಂದಿಕೆ'ಯಾಗುವ ಸಂಗತಿಯನ್ನು ರಾಯರಿಗೆ ಬಿನ್ನವಿಸಿಕೊಂಡು 'ದಯವಿಟ್ಟು ಬಡವನ ಆತಿಥ್ಯವನ್ನು ಸ್ವೀಕರಿಸಿ, ಹೆಣ್ಣನ್ನು ನೋಡಿಹೋಗಬೇಕೆಂದು' ಬರೆದಿದ್ದರು. ಅವರು ಆಮಂತ್ರಣ ಕೊಡದಿದ್ದರೂ ತಾವೇ ಅನುಸಂಧಾನ ಮಾಡಿ ಏನೋ ಒಂದು ನೆಪ ಹೂಡಿ ಮೈಸೂರಿಗೆ ಹೋಗುವುದಕ್ಕೆ ಸಿದ್ಧರಾಗಿದ್ದರು. ಇನ್ನು ಆಮಂತ್ರಣವೂ ಬಂದಮೇಲೆ ಸಡಗರ ಕೇಳಬೇಕೇ?

ಹಿಂದೆಷ್ಟೋ ಬಾರಿ ಬಂದಿದ್ದ ಹೆಣ್ಣುಗಳನ್ನು....ಅಂದರೆ ವಿವಾಹ ವಯಸ್ಕರಾದ ತರುಣರಿಗೆ ಬರುವ ಗಂಡಾಂತರಗಳನ್ನು....ಉಪಾಯದಿಂದ ನಿವಾರಿಸಿದ್ದ ವಾಸುವಿಗೂ ಇದು ಅಸಾಧ್ಯವಾಗಿ ತೋರಿತ್ತು. ಡಾಕ್ಟರ ಸಂಬಂಧ ಹೇಗಾದರೂ ಆಗಿಯೇ ಬಿಡಬೇಕೆಂಬ ತಂದೆಯ ಹಟಮಾರಿತನವನ್ನು ಎಷ್ಟೋಸಲ ಮನಸ್ಸಿನಲ್ಲಿಯೇ ಬೈದುಕೊಂಡಿದ್ದ........ಹೊತ್ತಿಗೆ ಸರಿಯಾಗಿ ಹೇಳದೆ ಕೇಳದೆ ಎಲ್ಲಿಗಾದರೂ ಎದ್ದುಬಿಡುವುದು ಎಂದೂ ಅಂದುಕೊಂಡ. ಆದರೆ ಮನಸ್ಸಿನ ಕ್ಷಣಿಕ ಭಾವನೆಗಳು ರೂಪುಗೊಂಡು ಕಾರ್ಯೋನ್ಮುಖವಾಗಲು ತಕ್ಕ ಗುಂಡಿಗೆ ಮಾತ್ರ ವಾಸುವಿಗೆ ಇಲ್ಲದಾಯಿತು. ಗುಂಡುವನ್ನು ಸಲಹೆ ಕೇಳಿದ ಅವನು ಶುಭಕಾರ್ಯಕ್ಕೆ ಕಲ್ಲುಹಾಕಲು ಒಪ್ಪನು ರಾಯರ ಹೆದರಿಕೆಯಿಂದವೆಂದೂ ಅಂದುಕೊಳ್ಳಬಹುದು. ಆದರೆ ಗೆಳೆಯನ ಮನಸ್ಸಿನ ನೋವನ್ನೂ ಸಹಿಸನು. ಆ ದಿನ ಸಮಯಕ್ಕೆ ಬಂದಿತ್ತು. ವಾಸುವು ಗಂಟು ಮೂಟೆ ಕಟ್ಟುವ ಚಿನ್ಹೆಗಳೇ ಇಲ್ಲ. ಪುಟ್ಟೂರಾಯರ ಪುಟ್ಟಗರ್ಜನೆಯೊಂದು ಕೇಳಬಂತು....ತನ್ನ ವಾರಿ ನಕ್ಷತ್ರವನ್ನು ಬಯ್ದುಕೊಂಡು ವಾಸು ಹಾಸಿಗೆ ಮೂಟೆಯನ್ನು ಕಟ್ಟಿದನು. ಅಳಿಯನ ಹಿಂದೆ ಗೆಳೆಯ ಗುಂಡುವೂ ಹೊರಟನು. ರಾಯರ ಸಂತೋಷಕ್ಕೆ ಪಾರವೇಯಿಲ್ಲ.

೨

ಹೆಣ್ಣನ್ನು....ಹೆಣ್ಣಿನ ಮನೆಯನ್ನು....ಹೆಣ್ಣಿನ ಹಿಂಡು ಬಳಗವನ್ನು ನೋಡಿದ್ದಾಯಿತು. ಕಲ್ಯಾಣಿಯ (ಹೆಣ್ಣಿನ ಹೆಸರು) ಕಲ್ಯಾಣಿ ರಾಗವನ್ನು ಸುಸ್ವರದ ಹಾರ್ಮೋನಿಯಂ ಮಧುರತಾನದೊಂದಿಗೆ ಕೇಳಿದ್ದೂ ಆಯಿತು.

ಡಾಕ್ಟರ್ ಮನೆಯ ಆಪ್ತಾನ್ನ ಆತಿಥ್ಯದ ಸವಿಯನ್ನು ಕಂಡದ್ದೂ ಆಯಿತು. ವಾಸುವಿಗೆ ಕ್ಷೋಭದಿಂದ ಏನೂ ಸೇರದು—ಬಲವಂತಕ್ಕೆ ಎರಡು ಪ್ಲೇಟು ಕೇಸರಿಭಾತನ್ನೂ, ಒಂದು ಪಾವಿನಷ್ಟು ಬೋಂಡವನ್ನೂ ಸೇರಿಸಿಕೊಂಡು ತಿಂದಿದ್ದನು. ಮೈಸೂರಿನ ಕಾಫಿಯೆಂದರೆ ವಾಸುವಿಗೊಂದು 'ಹೃದಯ ದೌರ್ಬಲ್ಯ'-ಮನಸ್ಕ್ಲೇಶದ ಪರಿಣಾಮದಿಂದ ನಾಲ್ಕೈದು ಲೋಟಗಳಲ್ಲಿಯೇ ತೃಪ್ತಿಪಟ್ಟುಕೊಂಡಿದ್ದನು. ಉಪಹಾರ ಮುಗಿಯಿತು -ಮಾತುಕತೆಗಾರಂಭವಾಯಿತು. ಡಾಕ್ಟರು ತಮ್ಮ ಸ್ಥಿತಿಗತಿಗಳನ್ನು ವಿವರಿಸಿ 'ಕನ್ಯಾದಾನ'ದ ಪುಣ್ಯವನ್ನು ದೊರಕಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡರು. ವಾಸುವಿನ ಪರವಾಗಿ ರಾಯರು 'ಆಗಬಹುದು' ಎಂದೂ ಬಿಟ್ಟರು. ವಾಸು ಬೆಪ್ಪನಂತೆ ಅಪ್ಪನ ಮುಖವನ್ನೊಮ್ಮೆ, ಮುಂದೆ ಮಾವನಾಗುವ 'ನವಿತ ವಿಲಾಸಿಯ ತಾತ'ನ ಮುಖವನ್ನೊಮ್ಮೆ ನೋಡಿ ತಿಂದ ಬೋಂಡವನ್ನು ಜೀರ್ಣಿಸಿಕೊಳ್ಳುತ್ತಾ ಕುಳಿತನು.

ಲಗ್ನಪತ್ರಿಕೆ ಮಹೋತ್ಸವವೂ ಅಂದೇ ರಾತ್ರಿ ನೆರವೇರಿತು. ವಾಸು ಗುಂಡು ಇಬ್ಬರ ಹೊರತು ಆರ್ಯರ ಬಳಗವೆಲ್ಲಾ ಮಾರನೆಯದಿವಸ ಊರಿಗೆ ಪ್ರಯಾಣ ಬೆಳೆಸಿದರು. ಗೆಳೆಯರಿಬ್ಬರೂ ಕಾಲೇಜ್ ಹಾಸ್ಟೆಲ್ ಸೇರಿದರು. ನವರಾತ್ರಿಯ ಉತ್ಸವ ನೋಡಿ ಹೋಗುವ ಚಪಲವೊಂದುಕಡೆ......ಮತ್ತೆ ವಾಸುವಿನ 'ಸ್ವಂತಕೆಲಸ'ವೊಂದುಕಡೆ ಅವರನ್ನು ಮೈಸೂರಿನಲ್ಲಿ ಉಳಿಸಿತು.

ವಾಸುವಿನ ನೀರವತೆಯು ಗುಂಡುವಿಗೆ ಆಶ್ಚರ್ಯವನ್ನುಂಟುಮಾಡದೆ ಇರಲಿಲ್ಲ. ವಾಸುವಿನ ಆದ್ಯಂತ ಚರಿತ್ರೆಯನ್ನು ಬಲ್ಲ ಭೂಪನೆಂದರೆ ಗುಂಡು. ಹಾಸ್ಟೆಲ್ಲಿನ ಸುಖಭೋಜನ ತೀರಿಸಿಕೊಂಡು ಇಬ್ಬರೂ ಹರಟೆ ಕೊಚ್ಚುತ್ತ ಮಲಗಿದ್ದರು. ಗುಂಡು ಮೆಲ್ಲಗೆ ಕೀಟಲೆಗಾರಂಭಿಸಿದನು.

'ಅಂತೂ ಮದುವೆಗೆ ಒಪ್ಪಿದೆಯಲ್ಲಾ ವಾಸು-ಸೈ ಬಿಡೋ ಶಹಭಾಸ್'

ವಾಸುವಿಗೆ ಉತ್ತರ ಹೊಳೆಯಲಿಲ್ಲ.

'ಹೆಣ್ಣು ಏನು ಅನಿಸ್ತಮ್ಮಾ......ನಿನ್ನ 'ಆದರ್ಶ ಧರ್ಮಪತ್ನಿ'ಗೆ ಹೊಂದಿಕೆಯಾಯಿತೋ?!'

ವಾಸುವು ಮಾತು ಮರೆಸಲೆತ್ನಿಸಿದನು. ಆದರೆ ಗೆಳೆಯನ ನಿರ್ಧಾರದ ಮುಂದೆ ಅವನ ಆಟ ನಡೆಯಲಿಲ್ಲ.

‘ಹಾಗಾದರೆ ಒಪ್ಪಿದಹಾಗೇ ತಾನೇ ?’

‘ನಾನೇನೋ ಮಾಡಲಿ. ಅಪ್ಪ ಮಾಡಿದ್ದು ನೀನೇ ನೋಡುತ್ತಾ ಇದ್ದೆಯಲ್ಲಾ.’

‘ಬೇಡದಿದ್ದರೆ ಆಗಲೇ ಬೇಡ ಅನ್ನಬೇಕಾಗಿತ್ತು.’

‘ಅಷ್ಟು ಧೈರ್ಯ ಆಗ ಬರಲಿಲ್ಲವಮ್ಮಾ. ಈಗ ಏನು ಮಾಡೂ ಅಂತೀ.’

‘ನಾನೇನೂ ಹೇಳೊಲ್ಲ. ಒಪ್ಪಿಕೊಂಡೋನು ನೀನು....ಮಾಡಿಕೊ. ಏನೀಗ ಆದ್ದು ಅನ್ಯಾಯ.’

‘ಅಲ್ಲವೋ ಗುಂಡೂ—ಈಡಿಯಟ್—ಆ ಹಯವದನಾನ ಹೇಗೆ ಕಟ್ಟಿಕೊಳ್ಳಲೋ...........ನಿನಗೆ...............’

‘ಹೇಗೆ ಅಂದರೆ ಅಗ್ನಿಸಾಕ್ಷ್ಯವಾಗಿ....ಗುರುಹಿರಿಯರ ಎದುರಿಗೆ ಧರ್ಮಪತ್ನಿಯನ್ನಾಗಿ ಸ್ವೀಕರಿಸುವುದು.’

ಆ ಸ್ವೀಕರಿಸುವುದೇ ವಾಸುವಿನ ಸಮಸ್ಯೆ. ಕಲ್ಯಾಣಿಯ ಕಲ್ಯಾಣ ಗುಣಗಳು ತನಗೊಪ್ಪಿಗೆಯಾಗದಿದ್ದುದೊಂದು ಕಾರಣವಾಗಿದ್ದರೆ ಅದಕ್ಕೂ ಗುರುತರವಾದದ್ದು ಮತ್ತೊಂದು ಕಾರಣವಿತ್ತು. ಅದೇ ವಾಸುವಿನ ಮನಸ್ಸನ್ನು ಕೊರೆಯುತ್ತಿದ್ದುದು. ಸರ್ವಜ್ಞ ಗುಂಡು ಆ ವಿಷಯಕ್ಕೆ ಸಂಭಾಷಣೆ ಬಾರದಂತೆ ಮೆಲ್ಲಮೆಲ್ಲನೆ ಬೇರೆ ಬೇರೆ ವಿಷಯಗಳಿಗೆಳೆಯುತ್ತಿದ್ದ. ಈ ಬಿಗ್ಗಾಮುಗ್ಗಿಯಲ್ಲಿ ಬಡಪಾರ ಎಷ್ಟು ದೂರ ತಡೆದೀತು ?

ಇಬ್ಬರೂ ಚಿಂತಾಮಗ್ನರಾದರು. ಗುಂಡುವು ಕೂಡ ಚಿಂತಿಸುತ್ತಿದ್ದನು. ರಾಯರ ಗೌರವಕ್ಕೆ ಭಂಗತಾರದಂತಿರಬೇಕು—ಈ ಸಂಬಂಧ ಹೇಗಾದರೂ ತಪ್ಪಿಹೋಗಬೇಕು. ಅದಕ್ಕೆ ಹಂಚಿಕೆಯಾಗಬೇಕು. ಯೋಚನೆಯಲ್ಲಿ ಹೊತ್ತು ಹಾರಿ ಕಾಫಿಯ ವೇಳೆಯನ್ನು ಬಳಿ ಬರಿಸಿತೇ ವಿನಾ ಬಗೆ ಮಾತ್ರ ಹರಿಯಲಿಲ್ಲ.

೩

ದಸರೆಯನ್ನು ಮುಗಿಸಿಕೊಂಡು ಮಿತ್ರರಿಬ್ಬರೂ ಊರು ಸೇರಿದರು. ವಾಸುವಿನ ಜೀವನವು ಅಂದಿನಿಂದ ದುರ್ಭರವಾಗುತ್ತಬಂದಿತು. ತಂದೆಗೆ ಎದುರು ಹೇಳಿ ಜಯಿಸಿಕೊಳ್ಳುವ ಧೈರ್ಯವಿಲ್ಲದ ದುಃಖವೊಂದುಕಡೆ, ತನಗೆ ಬೇಡದ ಯಾವದೋ ಹೆಣ್ಣನ್ನು ಒಲಿದಂತೆ ನಟಿಸಿ ಕಟ್ಟಿಕೊಳ್ಳಬೇಕಾದ ದುಃಖವೊಂದು ಕಡೆ. ಹೀಗಾಗಿ ಅವನಿಗೆ ಪ್ರಪಂಚವೇ ಬೇಡವಾಗಿ ತೋರುತ್ತ ಬಂದಿತು. 'ಪರೀಕ್ಷೆಯಾಗಿ ಹೋಗಲಿ ಅನಂತರ ವಿವಾಹ ನೆರವೇರಲಿ' ಎಂದು ಗುಂಡುವಿನ ಮೂಲಕ ವಿವಾಹವನ್ನು ಮುಂದೆ ಹಾಕಿಸಿದ್ದ. 'ಅದರೇನು, ಎಂದಾದರೂ ಆ ಬಲಿಯ ಬಲೆಗೆ ಬೀಳಬೇಕಲ್ಲಾ' ಎಂಬ ಕ್ಲೇಶವು ಅವನನ್ನು ಕೊರೆಯುತ್ತಲೇ ಇತ್ತು.

ಈ ಗೊಂದಲದಲ್ಲಿ ತನ್ನ ಸಹಪಾಠಿಯನ್ನೂ ಮರೆತುಬಿಟ್ಟಿದ್ದನು. ನಾಲ್ಕುವರ್ಷಗಳಿಂದ-ಅಂದರೆ ತಾನು ಇಂಟರ್‌ಮೀಡಿಯೇಟ್ ತರಗತಿಗೆ ಬಂದ ಕಾಲದಿಂದ ಚೆನ್ನಾಗಿ ಬಲ್ಲ ರಮೆಯನ್ನು ಮರೆಯಲೆತ್ನಿಸಿದನು. ಎಷ್ಟೋ ಬಾರಿ ತಮ್ಮ ಮೈತ್ರಿಯನ್ನು ಕಚ-ದೇವಯಾನಿಯರ ಗೆಳೆತನಕ್ಕೆ ಇಬ್ಬರೂ ಹೋಲಿಸಿಕೊಂಡಿದ್ದರು. ವಾಸುವೆಂತು ರಮೆಯ ಗುಣಕ್ಕೆ ಮರುಳಾಗಿ ಮನಸೋತಿದ್ದನೋ ರಮೆಯೂ ಅಂತೆಯೂ ವಾಸುವಿನ ತಿಳಿಮನದ ಎಳೆ ಬೆಳಕಿಗೆ ತಲೆಬಾಗಿದ್ದಳು. ಮುಗ್ಧೆ....ಯೌವನೆಯಾಗುತ್ತಿದ್ದಳು....ಮೊಗ್ಗೆಯು ಹೂತನಕ್ಕೆ ಮೆಲ್ಲಮೆಲ್ಲನೆ ಅಡಿಯಿಡುತ್ತಲಿದ್ದಿತು....ಅಷ್ಟರಲ್ಲಿಯೇ ಯಾರೋ ಎಲ್ಲಿಂದಲೋ ಒಂದಪೂರ್ವಬಗೆಯ ಕಂಪನ್ನು 'ಮೊಗ್ಗೆ-ಹೂವಿಗೆ' ಸೇಚನಮಾಡಿದರು....ಒಂದೆರಡುವರ್ಷ ಕಳೆಯಿತು....ಮತ್ತೆ ಯಾರೋ ಬಲಿಷ್ಠರು ಕಾಠಿಣ್ಯಪರಾಕಾಷ್ಠತೆಯಿಂದ ಕಂಪನ್ನು ಕಿತ್ತೊಯ್ದರು....ಅಂದಿನಿಂದ ಹೂವು ಅರಳುವುದನ್ನು ನಿಲ್ಲಿಸಿ ಮೆಲ್ಲ ಮೆಲ್ಲನೆ ಬಾಡುತ್ತ ಕಂದುತ್ತ-ಕುಂದುತ್ತ ಬಂದಿತ್ತು. ಕೆಲಕಾಲ ಹಾಗೆ ಕಳೆಯಿತು. ಆ ದಯಾರ್ತ ಬನಕ್ಕೆ ವಾಸುವು ಪ್ರವೇಶಿಸಿದ್ದನು. ಎಳೆತನದ ತಿಳಿಮನದಿಂದ ಹೂಗಿಡಕ್ಕೆ ನೀರೆರೆದು ಅದು ಚಿಗುರೊಡೆದು, ಹೂವರಳುವಂತೆ ಮಾಡಿದನು. ಕಾಡುಮೇಡುಗಳ, ಬೆಟ್ಟಗುಡ್ಡಗಳ, ನೀಲಾಂಬರದ ದಿವ್ಯಸೌಂದರ್ಯದ, ಹಕ್ಕಿಪಕ್ಕಿಗಳ ಬಗೆ ಬಗೆಯ ಬಣ್ಣಗಳನ್ನಾಯ್ದು ತಂದು ಆಶಾತುರನಂತೆ ತನ್ನ ಮೆಚ್ಚುಗೆಯ

ಗಿಡದ-ಮನಸ್ಸೊಂದಕ ವೃಕ್ಷಕ್ಕೆ ಹೋಲಿಸಲಾರಂಭಿಸಿದನು. ಪೂರ್ಣ ಕಣ್ತೆರೆದು ನೋಡಿತು. ತನ್ನ ಬಾಳು ಮುಗಿಯಲಿಲ್ಲ...ಮುಗಿಯುವುದಿಲ್ಲ...ಮುಗಿಯ ಬಾರದು.......ಚೆನ್ನಾಗಿ ಅರಳಬೇಕು....ಯಾರೊಬ್ಬರ ಮುಡಿಯನ್ನಾದರೂ ಅಲಂಕರಿಸಬೇಕು ಕಂಪಿನ ಕಂಪು ಸೂರಬೇಕು....ಅನಂತರ ತೃಪ್ತಹೃದಯ ವನ್ನು ಸಂತಸದಿಂದೆತ್ತಿಗೊಂಡು ಅನಂತತೆಯಲ್ಲಿ ಬೆರೆಯಬೇಕು ಎಂಬಾಸೆ ಮೂಡಿತು. ಬಂದು ಭಸ್ಮರಾಶಿಯಲ್ಲಿ ಬೆರೆತಿದ್ದ ಕೋಮಲ ಕುಸುಮಕ್ಕೆ ಅಮೃತಸೇಚನಮಾಡಿದ ಭಾಗ್ಯಶಾಲಿಯಿಂದು ನಿರ್ಭಾಗ್ಯನಾಗಿ ಕುಳಿತಿದ್ದಾನೆ. ರಮೆಯು ಕೆಲಬಾರಿ ಹೇಳಿಕಳುಹಿಸಿದ್ದರೂ ಅವಳನ್ನು ನೋಡುವುದಕ್ಕೆ ಹೋಗಿರ ಲಿಲ್ಲ. ಅವಳನ್ನು ಮನೆಗೆ ಕರೆಸಿಕೊಳ್ಳುವಷ್ಟು ಸ್ವಾತಂತ್ರ್ಯವಿರಲಿಲ್ಲ. 'ರಮೆ ಯನ್ನು ಹೋಗಿನೋಡಲೇ?' ಎಂಬುದೇ ಪ್ರಶ್ನೆಯಾಗಿತ್ತು. 'ತನ್ನನ್ನು ಆದರ್ಶಮೂರ್ತಿಯೆಂದು ಗ್ರಹಿಸಿದ್ದ ಅವಳಿಗೆ ಹೇಡಿತನದ ದೈನ್ಯಮೂರ್ತಿ ಯನ್ನು ತೋರುವುದೆಂತು' ಎಂದು ಚಿಂತಿಸಿದನು. ಆ ಮರುಕ್ಷಣವೇ ತನ್ನನ್ನು ಕಾಣದೆ ರಮೆಯೆಷ್ಟು ಮನಸ್ಸಿಗೆ ನೋವು ತಂದುಕೊಂಡಿರುವಳೋ ಎಂದು ಅವಳಿಗಾಗಿ ಮರುಗುವನು. ಅಳೆಯುತ್ತ ಸುರಿಯುತ್ತ ಕೊನೆಗೆ ಅವಳನ್ನು ಹೋಗಿ ನೋಡಿ ನಡೆದುದನ್ನು ನಿರ್ವಂಚನೆಯಿಂದ ಅವಳಿಗೆ ಹೇಳಿಬಿಡುವುದೇ ಉತ್ತಮವೆಂದು ನಿರ್ಧರಿಸಿಕೊಂಡನು.

೪

ದಸರಾ ರಜ ಮುಗಿದಿತ್ತು. ವಾಸು ಮೈಸೂರಿಗೆ ಹೋಗಿ ಹಿಂತಿರುಗಿದ ಸಂಗತಿಯೂ ರಮೆಗೆ ಗೊತ್ತಿತ್ತು. ಅವನೊಂದಿಗೆ ಅವನ ತಾಯ್ತಂದೆಗಳು ಹೋಗಿಬಂದ ಸಂಗತಿಯೂ ತಿಳಿದಿತ್ತು. 'ಯಾವುದಾದರೂ ಸಂಬಂಧವನ್ನು ಬೆಳೆಸುವುದಕ್ಕಿರಬಹುದೇ' ಎಂದು ಒಮ್ಮೊಮ್ಮೆ ಅಂದುಕೊಳ್ಳುವಳು. ಆದರೆ ತನ್ನ ಹೃದಯದ ಸ್ವಾಮಿಯು ತನಗೆ ತಿಳಿಸದೆ ಬೇರೆ ಹೆಣ್ಣನ್ನು....ಮದುವೆ ಗಾಗಿ ನೋಡಹೋಗುವ ವಂಚಕನಲ್ಲನೆಂದುಕೊಳ್ಳುವಳು. ಅವಳ ಮನಸ್ಸಿ ನಲ್ಲಿ ಹಿತಾಹಿತ ಭಾವನೆಗಳು ನಿಬಿಡಾರಣ್ಯದಲ್ಲಿ ಮಿನುಗುವ ಮಿಂಚಿನ ಹುಳ ದಂತೆ ಒಮ್ಮೆ ಕತ್ತಲೆ ಒಮ್ಮೆ ಬೆಳಕನ್ನು ಬರಿಸುತ್ತಿದ್ದವು. ಇವೆಲ್ಲ ಅಂದೋ ಲನಗಳ ಕಿರೀಟಪ್ರಾಯವಾಗಿ ತನ್ನನ್ನು ನೋಡಲಿಕ್ಕೆ ನಾಲ್ಕಾರುಬಾರಿ ಹೇಳಿ ಕಳುಹಿದರೂ ವಾಸುವು ಇತ್ತಕ್ಕೆ ಬರಲಿಲ್ಲವೆಂಬ ಚಿಂತೆ. ಇವುಗಳ ಮಧ್ಯೆ

ಹುಟ್ಟಿಸಿದ್ದಗಳು ಜೀವನಾಗುವುದೊಂದಷ್ಟರಿಯೆ? ರಮೆಯ ತಾಯಿಯು ಬಹಳ ಕಷ್ಟವನ್ನು ಕಂಡಿದ್ದ ಹೆಂಗಸು. ಗಂಡನನ್ನು ಕಳೆದುಕೊಂಡಮೇಲೆ ಮೈದುನರ ದಬ್ಬಾಳಿಕೆಗೆ ಸಿಲುಕಿ ಎಲ್ಲವನ್ನೂ ನೀಗಿಕೊಂಡು ಬೀದಿಯ ಭಿಕ್ಷುಕರಾಗಿದ್ದರು. ಆದರೆ ತಾಯ್ತನದ ಒಳಶಕ್ತಿಯು-ರಮೆಯ ಭವಿಷ್ಯತ್ಯೋಚನೆಯು ಅವರಿಗೆ ಒಂದು ದಾರಿ ತೋರಿಸಿತು. ಕೆಲವು ದೊಡ್ಡ ಮನುಷ್ಯರ ಮನೆಯ ಹೆಂಗಸರಿಗೆ ಕುಪ್ಪಸಗಳನ್ನು ಹೊಲಿದುಕೊಟ್ಟು ಮಗಳೊಂದಿಗೆ ಜೀವನ ಸಾಗಿಸುತ್ತಿದ್ದರು. ದುರದೃಷ್ಟವಶಾತ್ ರಮೆಯ ಗಂಡನೂ ತೀರಿಕೊಂಡ! ಸೀತಮ್ಮನವರ ತಲೆಯಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಮಗಳನ್ನು ಶಾಲೆಗೆ ಸೇರಿಸಿ ವ್ಯಾಸಂಗಮಾಡಿಸುತ್ತ ಬಂದರು. ರಮಾ ತನ್ನ ಜಾಣತನದಿಂದ ಸ್ಕಾಲರ್‌ಷಿಪ್ಪೊಂದನ್ನು ಸಂಪಾದಿಸಿಕೊಂಡು ತಾಯಿಗೆ ಹೊರೆಯಾಗದೆ ವಿದ್ಯಾವ್ಯಾಸಂಗವನ್ನು ಮುಂದುವರಿಸುತ್ತಿದ್ದಳು.

ಸೀತಮ್ಮನವರದು ಬಡತನದ ಸಂಸಾರ. ಆದರೆ ಜೀವನದ ಯಾವ ಸುಖವನ್ನೂ ಕಾಣದ ಕುಮಾರಿಯು ನೊಂದಾಳೆಂದು ಆದಷ್ಟು ಅಚ್ಚುಕಟ್ಟಿನಿಂದಲೇ ಸಂಸಾರವನ್ನು ಸಾಗಿಸುತ್ತಿದ್ದರು. ರಮೆಯು ವಾಸುವಿನೊಂದಿಗೆ ಸಲಿಗೆಯಿಂದ ಓಡಿಯಾಡುವುದು, ವ್ಯಾಸಂಗ ಮಾಡುವುದು ಅವರಿಗೆ ತಪ್ಪಾಗಿ ತೋರಿಬಂದಿರಲಿಲ್ಲ. ಹೆಣ್ಣುಗಂಡುಗಳು ಪರಸ್ಪರ ಕಂಡುಬಿಟ್ಟರೆ ಪ್ರಳಯವಾಗಿಬಿಡುವುದೆಂಬ ತಾತ್ತ್ವಿಕರ ಗುಂಪಿಗೆ ಸೀತಮ್ಮನವರು ಸೇರದಿದ್ದುದೇ ಕಾರಣವಿರಬಹುದು—ಅಥವಾ—ಅದಕ್ಕಿಂತಲೂ ಗಹನವಾದ ಕಾರಣವಿರಬಹುದು.

ವಾಸುವನ್ನು ಕಾಣದೆ ಚಿಂತಾಕ್ರಾಂತಳಾಗಿದ್ದ ಮಗಳನ್ನು ಸಮಾಧಾನಪಡಿಸುವುದು ಸೀತಮ್ಮನವರಿಗೆ ದುಸ್ಸಾಧ್ಯವಾಯಿತು. ಮನಸ್ಸಿನ ವೇದನೆಗೆ ಮಾತಿನ ಚಿಕಿತ್ಸೆಯು ನಿರರ್ಥಕವಾದುದೆಂಬುದನ್ನರಿತು ಸುಮ್ಮನಾದರು.

ಮನೆಯು ಚಿಕ್ಕದಾದರೂ ಹೊರಗೊಂದು ಪುಟ್ಟ ತೋಟವನ್ನೂ, ಹಾಳಗೋಡೆಯನ್ನೂ ಪಡೆದುದಾಗಿತ್ತು. ರಮೆಯೇ ನೀರೆರೆದು ಕೆಲ ಹೂಗಿಡಗಳನ್ನು ಬೆಳೆಸಿದ್ದಳು. ಜಾಜಿಯ ಬಳ್ಳಿಯ ಬಿಂಕವನ್ನು ಚೆಂಗುಲಾಬಿಯ ಬೆಡಗಿಗೆ ಹೋಲಿಸುತ್ತಾ ಜಾಜಿಯ ಬಳ್ಳಿಯಲ್ಲಿ ಗುಲಾಬಿ ಬಿಡಬಾರದೇ ಎಂದು

ಬಯಸುವಳು. ಸಂಪಿಗೆಯ ಸುರುಚಿರಾಕೃತಿಯಲ್ಲಿ ಮಲ್ಲಿಗೆಯ ಮಾಧುರ್ಯವನ್ನು ಬಯಸುವಳು....ಹೀಗೆ ತನ್ನ ಭಾವನೆಯ ಹಕ್ಕಿ ಹಾರಿದೆಡೆಯಲ್ಲೆಲ್ಲಾ ಹಾರುತ್ತ ಅದು ತೋರುತ್ತಿದ್ದ ಸುಂದರ, ವಿಚಿತ್ರ, ಅಮಾನುಷ ನೋಟಗಳನ್ನೆಲ್ಲಾ ನೋಡಿ ನೋಡಿ ಮನದ ಮಧುಪಾತ್ರೆಯನ್ನು ತುಂಬುತ್ತಿದ್ದಳು. ಆದರೊಮ್ಮೊಮ್ಮೆ ಈ ಅನುಭವಗಳನ್ನೆಲ್ಲಾ ಮರೆತು ಸ್ಮೃತಿ ಕಳೆದುಕೊಂಡ ಗಾಯಕನಂತೆ ಅಧೋವದನಳಾಗಿ ತನ್ನ ಬಾಳುವೆಯ ನೀರಸತೆಯನ್ನು ಚಿಂತಿಸುತ್ತ ಕಂಬನಿ ತುಂಬುವಳು.

* * * * * *

ವಾಸುವಂದು ಬಂದೇಬರುವನೆಂದು ರಮೆಯ ಮನಸ್ಸಿನ ಧೈರ್ಯ. ಹೇಗದು ಹುಟ್ಟಿ ಅವಳ ಚಿಂತೆಯ ಮುಡುಪನ್ನು ದೂರ ಬಿಸುಡಿತೋ ಅವಳೇ ಬಲ್ಲಳು. ಮುಂಚಿನಂತೆ ಎಲ್ಲಕಡೆಯಲ್ಲೂ ಸುಳಿದು 'ಸ್ವಾಗತ ಸಮಾರಂಭ'ವನ್ನು ಸಿದ್ಧಗೊಳಿಸಿದಳು. ಆ ಹೊತ್ತಿಗೆ ಸರಿಯಾಗಿ ವಾಸುವು ಬರಲೇಬೇಕೆ!

ಕಂಗಳೆರಡೂ ಬೆರೆತವು. ರಮೆಯ ಸ್ವಾಗತಸಮಾರಂಭವೆಲ್ಲಾ ಗಾಳಿಗೆ ತೂರಿಹೋಯಿತು. ಮನೆಗೆ ಬಂದವನನ್ನು 'ಬನ್ನಿ-ಕುಳಿತುಕೊಳ್ಳಿ' ಎಂದು ಹೇಳುವುದು ಕೂಡ ಮರೆತುಹೋಯಿತು. ತನ್ನ ಸೋಲನ್ನು ಗ್ರಹಿಸಿ ಒಳಕ್ಕೆ ಓಡಿಹೋದಳು. ಮುಂದಿನ ಕಾರ್ಯಕ್ರಮವನ್ನು ಸೀತಮ್ಮನವರೇ ನೆರವೇರಿಸಿ ವಾಸುವನ್ನು ಒಳಕ್ಕೆ ಕರೆತಂದು, ಕೈಗೆ ಕಾಫಿಯ ಲೋಟವನ್ನೀಯಬೇಕಾಯಿತು. ವಾಸುವು ಕೆಲವು ಸಾಂಪ್ರದಾಯಿಕ ಉಪಚಾರೋಕ್ತಿಗಳಿಂದ ಸೀತಮ್ಮನವರನ್ನು ಸಮಾಧಾನಪಡಿಸಿ ಮೆಲ್ಲನೆ ರಮೆಯ ಕೋಣೆಗೆ ಹೋದನು.

ರಮೆಯು ವಾಸುವಿನಾಗಮನವನ್ನು ಕಾಣಲಿಲ್ಲ; ಕಂಡಿದ್ದರೆ ಹಾಸಿಗೆಗೆ ಮುಖವಿಟ್ಟು ಅಳುವುದನ್ನು ನಿಲ್ಲಿಸಿಬಿಡುತ್ತಿದ್ದಳು. ವಾಸುವೇ ಬಳಿಸರಿದು, ಅವಳ ಮೊಗವನ್ನು ಮೆಲ್ಲನೆತ್ತಿ:—

'ರಮಾ........' ಎಂದನು.

ಆ ಮಧುರ ನುಡಿಯು ರಮೆಯನ್ನು ರಮಿಸಿ ಬಹಳ ದಿನಗಳಾಗಿದ್ದುವು. ಇಂದು ತನ್ನ ತಪದ ಸಿದ್ಧಿಯೆಂದು ಸಂತಸಗೊಂಡು

'ಏನು........' ಎಂದಳು.

'ಕಣ್ಣಲ್ಲಿ ಏತಕ್ಕೆ ನೀರು ?'

'ಏತಕ್ಕೂ ಇಲ್ಲ ಸುಮ್ಮನೆ.'

'ನನ್ನಲ್ಲಿ ಹೇಳಬಾರದೇನು ?'

'ಹೇಳುವುದಕ್ಕೇನಿದೆ. ನೀವು........'

'ನಾನು ಇಷ್ಟುದಿವಸ ಬರಲಿಲ್ಲವೆಂದೋ ?'

'ಹೂ....ಎನ್ನಲೇನು.'

'ಅನ್ನು ರಮಾ....'

'ಆಗಲಿ ಅಂದೆ. ಇಷ್ಟುದಿವಸ ಎಲ್ಲಿಗೆ ದಯಮಾಡಿಸಿದ್ದಿರಿ.'

'ಮೈಸೂರಿಗೆ........'

'ಟೆನ್ನಿಸ್ ಮ್ಯಾಚಿನ್ನಿಗೋ ?'

'ಹೂ....ಅದೂ ಒಂದು ಕಾರಣ.'

'ಹಾಗಾದರೆ !'

ಮುಂದಿನದನ್ನು ಹೇಗೆ ಹೇಳುವುದು. ಸ್ವಲ್ಪಹೊತ್ತು ನಿರವನಾಗಿ ಕುಳಿತನು. ಯಾವುದೂ ಬಗೆಹರಿಯಲಿಲ್ಲ. ರಮೆಯು ಎವೆಯಿಕ್ಕದೆ ತನ್ನನ್ನೇ ನೋಡುತ್ತ ಉದ್ವೇಗದಿಂದ ಕಾಯುತ್ತಿದ್ದುದನ್ನು ಕಂಡನು. 'ಎಂದಾದರೂ ಹೇಳಲೇಬೇಕು ಸಂಕೋಚವೇತಕ್ಕೆಂದು' ಧೈರ್ಯಮಾಡಿಕೊಂಡು,

'ರಮಾ........'

'ಏನು ?'

'ನೀನು ಮೈಸೂರಿನಲ್ಲಿ ಡಾಕ್ಟರ್ ನಂಜುಂಡಯ್ಯನವರನ್ನು ಬಲ್ಲೆಯಾ?'

'ಕೇಳಿರುವೆ.'

'ಅವರಿಗೊಬ್ಬಳು ವಿವಾಹ ವಯಸ್ಕಳಾದ ಮಗಳಿರುವುದು ಗೊತ್ತೇನು?'

'ಇಲ್ಲ.'

'ಅವಳನ್ನು ನಾನು ಮದುವೆಯಾಗಬೇಕೆಂದು ತಂದೆಯವರ ಬಲವಂತ. ಹೆಣ್ಣನ್ನು ನೋಡುವುದಕ್ಕಾಗಿಯೇ ಹೋಗಿದ್ದುದು. ರಮಾ....'

'ಏನು ?'

'ಇದಕ್ಕೆ ನೀನೇನನ್ನುವೆ ?'

‘ಏನೂಯಿಲ್ಲ. ಸಂತೋಷ’ ಎಂದು ತಲೆಬಾಗಿದಳು.

ಅವಳ ಬಾಗಿದ ಮುಖವನ್ನು ನೋಡುವ ಧೈರ್ಯ ಕೂಡ ಇಲ್ಲದೆ ವಾಸುವೂ ತಲೆಬಾಗಿದನು....ಈ ಶಾಂತಿ ಸಂದೇಶದ ಪ್ರಭಾವ ಎಷ್ಟುಹೊತ್ತು ವ್ಯಾಪಿಸಿತ್ತೋ ಇಬ್ಬರೂ ಅರಿಯರು. ಸೀತಮ್ಮನವರು ಬಂದು ಎಚ್ಚರಿಸಿದುದು ಮಾತ್ರ ಜ್ಞಾಪಕ.

ರಮೆಯು ಸೀತಮ್ಮನವರನ್ನು ಕರೆದು ಹೊರಗೆ ಹೋದಳು. ಸ್ವಲ್ಪ ಕಾಲಾನಂತರ ಅವರೊಬ್ಬರೇ ಹಿಂದಿರುಗಿದಾಗ ಅವರೆರಡು ಕಂಗಳೂ ಶೋಕ ದೇವಿಗೆ ಅಭಿಷೇಕಮಾಡಿದ ಗುರುತನ್ನು ತೋರುತ್ತಿದ್ದುವು.

ವಾಸುವು ಎದ್ದು ಹೊರಡಲನುವಾದನು. ರಮೆಯನ್ನು ಹತ್ತಿರ ಕರೆದು ಧೃಡಮನಸ್ಸಿನಿಂದ ಕೈಹಿಡಿದು:—

‘ಹೆದರಬೇಡ ರಮಾ. ಎಂದಿದ್ದರೂ ನೀನೇ ನನಗೆ....ಮುಂದೇನೋ ಹೇಳಬೇಕೆಂದಿದ್ದನು. ಅಷ್ಟರಲ್ಲಿಯೇ ಮಾತು ಹೊರಡದಾಗಿ ಸುಮ್ಮನಾಗಿ ಮನೆಗೆ ಹೊರಟುಬಿಟ್ಟನು. ಸೀತಮ್ಮನವರ ಮನೆಯಿಂದ ದಾರಿದೂರ....ದೂರವಾಗುತ್ತಿದ್ದ ಹಾಗೆ ವಾಸುವಿನ ಮನಸ್ಸು ಅವರ ಹತ್ತಿರ ಹತ್ತಿರ ಬಂದು ಸುಳಿಯಲಾರಂಭಿಸಿತು. ದೃಷ್ಟಿ ಚಾಚುವತನಕ ಬಾಗಿಲ ಬಳಿ ಬೆಳಕಿಗೆ ಬೆನ್ನಿತ್ತು, ಕತ್ತಲೆಯನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದ ತಾಯಿ ಮಗಳನ್ನು ನೋಡುತ್ತ ನೋಡುತ್ತಾ ಹೊರಟುಹೋದನು.

೫

ಈ ಅನುರಾಗರಹಿತ ಮದುವೆಯನ್ನು ಹೇಗಾದರೂ ಮಾಡಿ ನಿಲ್ಲಿಸಿ ಬಿಡಬೇಕೆಂಬ ಗುಂಡುವಿನ ಪ್ರಯತ್ನ, ವಾಸುವಿನ ಆಶಯಗಳೆರಡು ಭಗ್ನವಾದವು. ಮಾತುಕೊಟ್ಟದ್ದಾಗಿ ಹೋಯಿತು....ದೊಡ್ಡವರ ಸಂಬಂಧ. ಇನ್ನು ಇದಕ್ಕಿಂತಲೂ ಹೆಚ್ಚಿನ ಪರ್ಯಾಲೋಚನೆಗಳು ಪುಟ್ಟೂರಾಯರಿಗೆ ಬೇಕಿರಲಿಲ್ಲ. ವೈಶಾಖ ಶುದ್ಧ ನವಮಿ ದಿವಸಕ್ಕೆ ಲಗ್ನವೂ ನಿಷ್ಕರ್ಷಿಸಲ್ಪಟ್ಟಿತು. ಆ ವೇಳೆಗೆ ವಾಸುವಿನ ಮತ್ತು ಅವನ ಸ್ನೇಹಿತರ ಪರೀಕ್ಷೆಯು ಮುಗಿದಿರುತ್ತದೆಂಬುದೊಂದು ವಿಚಾರ, ಡಾಕ್ಟರ್ ಸಾಹೇಬರಿಗೂ ಹಣಕಾಸುಗಳನ್ನೊದಗಿಸಿಕೊಂಡು ‘ಅದ್ದೂರಿ’ಯಿಂದ ಲಗ್ನ ನೆರವೇರಿಸಲನುಕೂಲವಾಗುತ್ತದೆಂಬು

ಮೊಂದು ವಿಚಾರ. ಹೀಗೆ ಎರಡೂ ಸೇರಿ ನಿಶ್ಚಿತಾರ್ಥಕ್ಕೂ ಲಗ್ನಕ್ಕೂ ೬-೭ ತಿಂಗಳ ಅಂತರವನ್ನೇರ್ಪಡಿಸಿತು.

ವಾಸುವಿನ ಪರೀಕ್ಷೆಯಾರಂಭವಾಯಿತು. ಪರೀಕ್ಷಾ ಭವನದಲ್ಲಿ ದಿನಕ್ಕೊಂದು ಬಾರಿ ರಮೆಯ ಸಂದರ್ಶನವಾಗುತ್ತಿತ್ತು. ಮೊದಲಿನ ಸಲಿಗೆಯ ಆಕರ್ಷಣೆಯಿಲ್ಲ....ಸಂಪ್ರದಾಯ ಸ್ನೇಹದ ಲೆಕ್ಕಾಚಾರದ ಒಂದೆರಡು ಮಾತುಗಳು. ಪರೀಕ್ಷೆ ಮುಗಿಯಿತು....ಇಬ್ಬರೂ ಚೆನ್ನಾಗಿಯೇ ಮಾಡಿದ್ದರು.

* * * * * *

ವೈಶಾಖಮಾಸ ಬಂದಿತು....ನವಮಿಯನ್ನು ಹತ್ತಿರ ತಂದಿತು. ಎಲ್ಲರೂ ಸಂತೋಷ ಪಾರಾವಾರದಲ್ಲಿ ಮುಳುಗಿ ಹೋಗುತ್ತಿದ್ದರೂ ವಾಸು ಮಾತ್ರ ಪಡದಲ್ಲಿಯೇ ನಿರ್ಲಿಪ್ತನಾಗಿ ನಿಂತು ಆ ಮಾಯೆಯ ಮೋಹವನ್ನು ನೋಡಿ ತಿರಸ್ಕಾರದಿಂದ ನಗುತ್ತಲಿದ್ದನು. ವರಪೂಜೆಯಾಯಿತು. ನಾಂದಿಯಾಯಿತು. ವಿಜೃಂಭಣೆಯಿಂದ ಮೆರವಣಿಗೆಯೂ ಮುಗಿಯಿತು....ಉಳಿದುದ್ದೇ ಮುಖ್ಯ ಉತ್ಸವ. ವಾಸುವಿಗೆ ಮಾತ್ರ ಕಠಿಣವ್ರತವೊಂದರ ಅನುಷ್ಠಾನ—ಯಾವಜ್ಜನ್ಮದ ಬಂಧನ. ದುಃಖಮಯವಾದ ಸೌಖ್ಯದ ಸೋಗು. ಈ ಭಾವನೆಗಳ ಮಧ್ಯೆ ತನ್ನ ಹೇಡಿತನದ ಕಪ್ಪು ಚಿತ್ರಗಳು-ತಾನು ಕೈಯ್ಯಲ್ಲಿ ಹಿಡಿದು, ಮೂಸಿ, ಬಿಸುಡಿದ ಹೂವಿನ ಸ್ಮರಣೆ. ಇವುಗಳ ಸಂರಾವದಲ್ಲಿ ಉತ್ಸವದ ಭೇರಿನಿನಾದವು ಕಿವಿಯನ್ನು ಮುಟ್ಟುವುದೇ ?

ಮದುವೆಯ ಮುಹೂರ್ತ ಸಮೀಪಿಸಿತು. ಮದುವೆಯನ್ನು ನಿಶ್ಚಯಿಸಿದ್ದ 'ಗುರುಹಿರಿಯರು' ದೀರ್ಘವಾಗಿ ವೇದಘೋಷವನ್ನು ಮಾಡುತ್ತಲಿದ್ದಾರೆ. ತುಂಬಿದ ಸಭೆಮಧ್ಯದಲ್ಲಿ, ಪೀತಾಂಬರಧಾರಿಗಳಾಗಿ ಎದುರುಬದುರು ಇಬ್ಬರು ಬೀಗರೂ ಬೀಗಿತ್ತಿಯರೂ ನಿಂತಿದ್ದಾರೆ. ಸುಮಂಗಲೆಯರ ಸುಮಂಜುಳ ಕಲಕಲರವ. ಧಾರೆಯ ಅಂತರ್ಪಟವು ವಧೂವರರ ಮಧ್ಯೆ ನಿಂತಿದೆ. ಶಾಸ್ತ್ರಸಮ್ಮತವಾದ ಪ್ರಥಮ ಪ್ರಣಯನೋಟವು ಬೀಳಬೇಕು....ವಾಸು ಕಲ್ಯಾಣಿಯ ಜೀವಗಳೆರಡೂ ಕೂಡಿ........'ಗುರುಹಿರಿಯರ' ಆಜ್ಞೆಯಿಂದ ಕೂಡಿ....ಜೀವನದ ಸುಖದುಃಖಗಳನ್ನು ಒಮ್ಮನದಿಂದ ಒಮ್ಮನಸಮ್ಮತಿಯಿಂದ ಸಹಿಸಿ ಅನುಭವಿಸುವುದಾಗಬೇಕು....ಅಂತಹ ಮಹತ್ಸಮಯವು ಸಂಭವಿಸಿದೆ

ಆಗ....ಆಗ....ತಂತಿಯ ಪತ್ರವೊಂದು ಡಾಕ್ಟರ ಕೈಸೇರಿತು....ಅವರು ಓದಿ ಕೊಂಡು ನಿಶ್ಚೇತನರಾಗಿ ಪ್ರಜ್ಞೆತಪ್ಪಿ ಬಿದ್ದುಬಿಟ್ಟರು.

ಸಭಾಮಂದಿರದಲ್ಲಿ ಅಲ್ಲೋಲ ಕಲ್ಲೋಲವೆದ್ದಿತು. ಡಾಕ್ಟರಿಗೆ ಸೇವಾ ಶಿಶ್ರೂಷೆಗಳಾದವು. ಹತ್ತಿರವಿದ್ದವರು ಯಾರೋ ತಂತಿಯನ್ನು ಘಟ್ಟಿಯಾಗಿ ಓದಿದರು.

'ನಂಜುಂಡಯ್ಯನವರಿಗೆ........ನಿಮ್ಮ.....ವೃದ್ಧ.....ತಂದೆಯವರು.... ಈ ಬೆಳಿಗ್ಗೆ—ತೀರಿಕೊಂಡರು....ಕೂಡಲೆ ಹೊರಟು ಬರುವುದು........ಕೃಷ್ಣ ರಾಜೇಂದ್ರ ಆಸ್ಪತ್ರೆ.'

ತಮ್ಮ ಬೀಗರ ತಂದೆಯವರು ಕಾಹಿಲೆಯಾಗಿ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿದ್ದುದು ಪುಟ್ಟೂರಾಯರಿಗೆ ತಿಳಿದಿರಲಿಲ್ಲ. ಕಾರ್ಯ ಮಿಂಚಿ ಹೋಯಿತು. ಅಪಶಕುನ....ವಿವಾಹ ನಿಂತುಹೋಯಿತು....ಗಂಡಿನ ಕಡೆ ಯವರು ಪೆಚ್ಚುಮೋರೆ ಹಾಕಿಕೊಂಡು ಮೈಸೂರಿಗೆ ಹಿಂದಿರುಗಿದರು.

೬

ಜಗನ್ಮೋಹನ ಅರಮನೆಯ ಸಭಾಮಂದಿರ. ಮಂದಿರವು ವಿದ್ಯಾರ್ಥಿ ಗಣದಿಂದ ಕಿಕ್ಕಿರಿದು ಹೋಗಿದೆ. ಇಂದು 'ಪದವೀದಾನ ಮಹೋತ್ಸವ.' ಕವಿ ರವೀಂದ್ರರು ಸ್ನಾತಕರಿಗೆ ಉಪದೇಶಿಸಿ ಪ್ರಶಸ್ತಿ ದಾನಮಾಡಲೊಪ್ಪಿ ದ್ದರು. ವಿದ್ಯಾರ್ಥಿಗಳು ಕುಳಿತಿದ್ದೆಡೆಯಿಂದಲೇ ಮಣಿಯುತ್ತ ತಮ್ಮ ಪ್ರಶಸ್ತಿ ಪತ್ರಿಕೆಗಳನ್ನು ಪಡೆದುಕೊಂಡು, ಗುರುದೇವನ ಉಪದೇಶಾಮೃತವನ್ನು ಪಾನ ಮಾಡಿ ತಂಡತಂಡವಾಗಿ ಹೊರಬಿದ್ದಿದ್ದರು. ಅವರಲ್ಲಿ ವಾಸು, ಗುಂಡೂ ಇಬ್ಬರೂ ಇದ್ದರು. ಮಾತನಾಡುತ್ತ ಆಡುತ್ತ ಮುಂದುವರಿಯಲು ಎಡಪಕ್ಕ ದಿಂದ ರಮಾದೇವಿಯು ಹೊರಬಿದ್ದುದು ಕಂಡುಬಂದಿತು.

ಬಾಗಿಲಬಳಿ ಬರುವ ಹೊತ್ತಿಗೆ ಸರಿಯಾಗಿ ಇಬ್ಬರ ದೃಷ್ಟಿಗಳೂ ಸಂಧಿಸಿ ದವು. ವಾಸುವು ಅವಳ ಬಳಿ ಸಾರಿ ಒಂದೆರಡು ಮಾತನಾಡಿ ತನ್ನ ಗೆಳೆ ಯರ ಬಳಗವನ್ನು ಬಂದು ಸೇರಿದನು.

* * * * * *

ಅದೇ ಸೀತಮ್ಮನವರ ಅದೇ ಪುಟ್ಟಮನೆ. ತೋಟದ ಮಧ್ಯೆಯಿದ್ದ ಕಲ್ಲು ಬೆಂಚಿನಮೇಲೆ ವಾಸುವು ರಮೆಯೊಂದಿಗೆ ಕುಳಿತಿದ್ದಾನೆ. ಇಬ್ಬರೂ ಯಾವದೋ ಚಿಂತೆಯಲ್ಲಿ ಮುಳುಗಿದ್ದಾರೆ. ಒಮ್ಮೊಮ್ಮೆ ವಾಸುವಿನ ಮುಖದ ಮೇಲೆ ನಗೆ ತೇಲುವುದು; ಅದನ್ನೆಲ್ಲಿ ರಮಾ ಕಂಡುಬಿಡುವಳೋ ಎಂದು ನಗೆಯನ್ನು ಒತ್ತಿಹಿಡಿದು ಚಿಂತಾಮುದ್ರೆಯನ್ನೇ ಸ್ಥಿರವಾಗಿ ಪ್ರಕಟಿಸಿಬಿಡು ವನು. ರಮೆಗೂ ಹಾಗೆಯೇ. ಅವನ ನಗೆಯಲ್ಲಿ ಆಶೆಯ ಲೀಲೆ; ಅವಳ ನಗೆಯಲ್ಲಿ ತೃಪ್ತಿಯ ತಾಂಡವ. ಈ ನಾಟಕಕ್ಕೆ ಪ್ರೇಕ್ಷಕರು ಕಳಂಕನೆಂದೆನಿಸಿ ಕೊಂಡಿರುವ ಅಕಳಂಕ ಶಶಿ. ಅವನ ಗೆಳೆಯ ವಸಂತ. ರಮೆಯ ಹಣೆ ಯಿಂದು ಸ್ಮಶಾನ ಶಾಸನವಾಗಿರಲಿಲ್ಲ; ಮಂಗಳದ್ರವ್ಯದಿಂದ ಶೋಭಿತವಾ ಗಿತ್ತು; ಅವಳ ಮುಡಿಯು ಮಲ್ಲಿಗೆಯ ಭಾರದಿಂದ ಜಗ್ಗುತ್ತ ತನ್ನ ರೂಪ ರಾಶಿಯಿಂದ ಜಗವನ್ನೇ ಮೋಹಬಂಧನದಲ್ಲಿ ಬಿಗಿಯುತ್ತಿತ್ತು. ಈ ಮಧ್ಯೆ ಮಾರುತನ ತುಂಟತನವು ಮಲ್ಲಿಗೆಯ ಕಂಪನ್ನು ವಾಸುವಿನ ಘ್ರಾಣೇಂದ್ರಿಯ ಕ್ಕೇರಿಸಿ ಅವನ ಅಂತರಂಗವನ್ನು ಅಲ್ಲೋಕಲ್ಲೋಲ ಮಾಡಿಬಿಡುತ್ತಲಿದ್ದಿತು. ಇವುಗಳೊಂದಿಗೆ ಅನತಿದೂರದಲ್ಲಿ ಕೇಳಬರುತ್ತಿದ್ದ ಮಧುರ ಸ್ತ್ರೀಕಂಠದ 'ಕೇದಾರಗೌಳ'ರಾಗದ ರಾಮಣೀಯಕ ರವ.

ರಮೆಯೇ ಧೈರ್ಯಗೊಂಡು, ಮಾತನ್ನಾರಂಭಿಸಲು ಯತ್ನಿಸಿದಳು.

'ಹಾಗಾದರೆ ಗುಂಡೂರಾಯರು ಆ ಸುಳ್ಳು ತಂತಿಯನ್ನು ಕೊಡದಿದ್ದರೆ ನೀವು ಕಲ್ಯಾಣಿಯನ್ನೇ ಕಲ್ಯಾಣ........'

'ಮತ್ತೆ ಅದರ ಜ್ಞಾಪಕಬೇಡ ರಮಾ....ನಾನು ಬುದ್ಧ ಹೇಡಿ. ಉತ್ತರನಿಗಿಂತಲೂ ಹೀನನು. ನಿನ್ನ ವಿಚಾರದಲ್ಲಿ ಅಕ್ಷಮ್ಯ ಅಪರಾಧಿ. ನೀನೇನು ಶಿಕ್ಷೆ ವಿಧಿಸಿದರೂ ಸಹಿಸಲು ಸಿದ್ಧನಾಗಿರುವೆ.'

ಶಿಕ್ಷೆ....ನಿಮಗೇನು ಶಿಕ್ಷೆ ವಿಧಿಸಲಿ....ಹಾ! ಹಾ!! ಶಿಕ್ಷೆ ಜ್ಞಾಪಕಕ್ಕೆ ಬಂತು....ವಿಧಿಸಲೇ?'

ಎಂದೊಮ್ಮೆ ಸಳೆಮಿಂಚಿನಂತೆ ಅವನಕಡೆ ನೋಡಿ ಮತ್ತೆ ತಲೆಬಾಗಿ ಕುಳಿತಳು. ಆ ಕ್ಷಣ ರಸಿಕ ಶಶಿಯು ಹತ್ತಿರ ಬಂದ ಕಪ್ಪು ಮೋಡವೊಂದರ ತೆರೆಯಿಂದ ಮುಖವನ್ನು ಮುಚ್ಚಿಕೊಂಡನು. ಶಿಕ್ಷೆಯನ್ನು ವಿಧಿಸುವಾಗ

ಧೈರ್ಯದ ಮೂರ್ತಿಯೇ ಆಗಿದ್ದ ರಮೆಯು ಕ್ಷಣಕಾಲಾನಂತರ ಅವನ್ನು ವಿಧಿಸದಿರಲು ಆತುರಳಾದಳು.

‘ಬೇಡಿ ಧೊರೆಯೇ. ಈ ನಿರ್ಭಾಗ್ಯಳ ಕೈಹಿಡಿದು ನೀವೇತಕ್ಕೆ ಹೆತ್ತ ತಾಯ್ತಂದೆಗಳನ್ನು ದೂರಮಾಡಿಕೊಳ್ಳುವಿರಿ. ವಿಧವೆಯರಿಗೆ ವಿಧಿ ವಿಧಿಸಿರುವ ‘ಸೇವಾಜೀವನ’ವಿದ್ದೇ ಇದೆ. ಅದರೊಂದಿಗೆ ತುಸು ‘ಆತ್ಮಾರ್ಪಣ’ವನ್ನು ಮಾಡಿದರಾಯಿತು.’

‘ರಮಾ, ಈ ಹುಚ್ಚು ಏನು? ಆತ್ಮವನ್ನೇ ಅರಿಯದ ನೀನು ಅರ್ಪಿಸಲೊಂದು ಆತ್ಮವನ್ನೆಲ್ಲಿತರುವೆ. ಸುಖದ ಗರಿಯನ್ನೂ ಕಾಣದ ನೀನು ಸೇವೆಯ ವಿರಕ್ತಿಯನ್ನು ಹೇಗೆ ಅರಿಯುವೆ.’

ಎಂದನ್ನುತ್ತಾ ಅವಳ ತಲೆಯನ್ನು ತನ್ನ ವಿಶಾಲ ಎದೆಯಮೇಲಿಟ್ಟುಕೊಂಡು ನೇವರಿಸುತ್ತಾ

‘ಒಪ್ಪುವುದಿಲ್ಲವೇ ರಮಾ. ನೀನೊಪ್ಪಿದರೆ ನನ್ನ ತಾಯ್ತಂದೆಗಳೂ ಒಪ್ಪುವರು. ನೀನು ವಿಧವೆ ಹೇಗೋ ಹಾಗೆ ನಾನೂ ವಿಧುರ. ವಿಧವೆಯರನ್ನು ವಿಧುರರು ತಾನೇ ಕೈಹಿಡಿಯಬೇಕು.’

ಎಂದನ್ನುತ್ತಿರುವಂತೆ ತನ್ನ ಕುತ್ತಿಗೆಯನ್ನು ಬಳಸಿ ಬರುತ್ತಿದ್ದ ಎಳೆ ತೋಳ ನೇವರಿಸಿ ರಮೆಯನ್ನು ಧೃಢವಾದ ಆಲಿಂಗನದ ಮಡುಲಿನಲ್ಲಿ ಸೂಕ್ಷ್ಮವಾಗಿ ತೇಲಿಬಿಟ್ಟನು.

* * * * * *

ಜೀವಗಳನ್ನು ಸುಖದುಃಖಗಳೆಂಬ ದೋಣಿಗಳಲ್ಲಿ ತೇಲಿಬಿಡುವ ಶಕ್ತಿಯದಾವುದು? ಎಂಬ ಪ್ರಶ್ನೆಯೊಂದು ಅವನ ಮನದಲ್ಲಿ ಮೊರೆಯುತ್ತಿತ್ತು. ಅವಳ ಮನದಿಂದ ‘ನಿರ್ವ್ಯಾಜ್ಯ......ನಿರುದ್ದಿಷ್ಟ,........ನಿಷ್ಕಾಮ ಪ್ರೇಮ...... ಪ್ರೇಮ....ಪ್ರೇಮ’ ಎಂಬ ಗೀತಿಕೆಯ ಮಾಧುರ್ಯವು ನಿಸರ್ಗವೆಲ್ಲವನ್ನೂ ಆವರಿಸಿ, ನಿಸರ್ಗದ ಪ್ರತಿಯೊಂದು ಕಣವೂ ‘ಪ್ರೇಮ.......ಪ್ರೇಮ’ವೆಂದು ಪ್ರತಿಸ್ಪಂದಿಸುವಂತೆ ಮಾಡಿಬಿಟ್ಟಿತು.

——o——

# ಹಾರ

—:—

ನಟರಾಜ ರಂಗಾಚಾರ್ಯರ ಹೆಸರು ಮೂಲೋಕ ವಿಖ್ಯಾತವಾಗಿತ್ತು. ಸರ್ವಾಂಗಸುಂದರವಾದ ದೇಹ, ವಿಶಾಲವಾದ ಎದೆ, ದೊಡ್ಡ ಬಗಸೆ ಕಂಗಳು, ಎಸಳಾದ ಮೂಗು, ಪ್ರಧಾನವಾದ ಹಣೆ, ಮುಖದಲ್ಲಿ ರಾಜಕಳೆಗಳು ಮಾತ್ರವಲ್ಲದೆ ನಾಯಕನಿಗಿರಬೇಕಾದ ಧೀರೋದಾತ್ತ ಗುಣ ಇವುಗಳೆಲ್ಲವೂ ಆಚಾರ್ಯರಲ್ಲಿ ಮನೆಮಾಡಿಕೊಂಡಿದ್ದವು. ಗಾಯನ, ಅಭಿನಯ, ಸಾಹಿತ್ಯ ಜ್ಞಾನಗಳ ತ್ರಿವೇಣೀಸಂಗಮವು ಆಚಾರ್ಯರಲ್ಲಿ ಕೂಡಿದಂತಿದ್ದಿತು. ದಕ್ಷಿಣ ಹಿಂದೂಸ್ಥಾನದಲ್ಲಿಯೇ ಆಚಾರ್ಯರಿಗೆ ಮಿಗಿಲಾದ ನಟರಿರಲಿಲ್ಲ. ದುಷ್ಯಂತ, ವತ್ಸರಾಜ, ರಾಮವರ್ಮ ಮೊದಲಾದ ಕಾವ್ಯಪಾತ್ರಗಳನ್ನು ಆಚಾರ್ಯರಂತೆ ಅಖಿಲ ಭಾರತವರ್ಷದಲ್ಲಿಯೇ ಯಾರಿಗೂ ಅಭಿನಯಿಸಲಾಗುತ್ತಿರಲಿಲ್ಲ. ದುಷ್ಯಂತನ ಲಾಲಿತ್ಯವೆಷ್ಟು ಆಚಾರ್ಯರಿಗೆ ಒಪ್ಪುತ್ತಿತ್ತೋ ಕೀಚಕನ ಭೀಷಣತ್ವವೂ ಅಷ್ಟೇ ಒಪ್ಪುತ್ತಿತ್ತು. ರಾವಣ, ಹಿರಣ್ಯಕಶಿಪು ಮೊದಲಾದ ಭಯಾನಕ ಪಾತ್ರಗಳನ್ನು ಧರಿಸಿಬಂದಾಗಲಂತೂ ಜನತೆಯು ಕಣ್ಣೆತ್ತಿ ನೋಡಲು ಹೆದರುತ್ತಿದ್ದಿತು. ಅರಸನಿಂದ ಅಗಸನವರೆಗೆ ಆಚಾರ್ಯರು ಯಾವ ಪಾತ್ರವನ್ನೇ ವಹಿಸಲಿ, ಯಾವ ವೇಷವನ್ನೇ ಹಾಕಲಿ ಒಪ್ಪುತ್ತಿತ್ತು. ರಸಿಕರೆನ್ನುತ್ತಿದ್ದಂತೆ 'ಹೇಳಿಮಾಡಿಸಿದ ಹಾಗಿರುತ್ತಿದ್ದಿತು.' ಇವರ ರಹಸ್ಯವೆಂದರೆ ನಾಟಕ ಕಲೆಯ ತಿರುಳಿನ ರುಚಿಯು ಆಚಾರ್ಯರ ನಾಲಿಗೆಗೆ ಗೊತ್ತಿತ್ತು; ಅಂತೆ ಕರಟವನ್ನು ನಿರರ್ಥಕವಾಗಿ ಹಲ್ಲಿನಿಂದ ಕೆರೆದು ನಿಷ್ಪ್ರಯೋಜನ ಪೊಂದುವ ಗೋಜಿಗೆ ಅವರು ಹೋಗುತ್ತಿರಲಿಲ್ಲ. ಪಾತ್ರಗಳನ್ನು ಅಭಿನಯಿಸುವಾಗಲಂತೂ, ತಾವೇ ಪಾತ್ರಗಳು, ಪಾತ್ರಗಳು ತಾವೇ ಎಂಬ ಭಾವನೆಯು ತಾಂಡವವಾಡುತ್ತಿರುತ್ತಿದ್ದಿತು. ಸಹನಟರು ಕೂಡ 'ಮಹಾಪ್ರಭು-ಜೀಯಾ' ಎಂದು ರಂಗದ ಹೊರಗೆ, ಬಣ್ಣದ ಕೋಣೆಯಲ್ಲಿ ಕರೆಯುತ್ತಿದ್ದರೇ ವಿನಾ 'ಯಜಮಾನರೇ' ಎಂಬ ಸಲಿಗೆಯ ನುಡಿಯಿಂದ ಮಾತನಾಡಿಸುವ ಸಾಹಸಕ್ಕೆ ಕೈಹಾಕುತ್ತಿರಲಿಲ್ಲ. ಮೂಢಜನರು ಆಚಾರ್ಯರ ಮೇಲೆ ದೇವರು ಬರುತ್ತಿದ್ದನೆಂದೂ ಅಂತೇ ಅವರು ಅಷ್ಟು ಸ್ಫೂರ್ತಿಯಿಂದ

ಅಭಿನಯಿಸುತ್ತಿದ್ದರೆಂದೂ ಆಡಿಕೊಳ್ಳುತ್ತಿದ್ದರು. ಮೂರ್ಖರ ಮಾತು ಹೇಗೇ ಇರಲಿ, ಆಚಾರ್ಯರ ಸರಿಸಮರಾದ ನಟರು ಬೇರೆ ಇರಲಿಲ್ಲವೆಂಬುದು ಎಲ್ಲರೂ ಒಪ್ಪುತ್ತಿದ್ದ ವಿಷಯವಾಗಿತ್ತು.

ಆಚಾರ್ಯರು ರಂಗಜೀವನದಲ್ಲಿ ಎಂತಹ ಸಂಪದ್ಯುತರೋ, ನಿತ್ಯ ಜೀವನದಲ್ಲಿಯೂ ಅಷ್ಟೇ ಹೆಚ್ಚಿನ ಅಂತಃಕರಣಯುತರು. ಬಹು ಕಷ್ಟದ ದೆಸೆಯಿಂದ ತಾವು ಮುಂದೆ ಬಂದಿದ್ದುದನ್ನು ತಮ್ಮ ಔನ್ನತ್ಯ ದೆಸೆಯಲ್ಲಿ ಮರೆತುಹೋಗಿರಲಿಲ್ಲ. ಅವರ 'ಲಲಿತಕಲಾ ಸೇವಾ ನಾಟಕ ಸಭೆ'ಯಲ್ಲಿ ನೂರುಮಂದಿಗಿಂತಲೂ ಹೆಚ್ಚಾಗಿ ಹೊಟ್ಟೆಹೊರೆಯುತ್ತಿದ್ದರು. ರಂಗಕ್ಕೆ ಉಪ ಯುಕ್ತರಾದವರು ಹತ್ತಿಪ್ಪತ್ತು ಜನರಿಗಿಂತಲೂ ಹೆಚ್ಚಾಗಿರಲಿಲ್ಲ; ಆದರೆ ಮಿಕ್ಕವರು ಆಚಾರ್ಯರ ಅಂತಃಕರಣದ ಬಳಗದವರು, ಅನಾಥರು, ದಿಕ್ಕಿಲ್ಲ ದವರು, ಆರ್ತರು!! ತಮಗೆ ಎಷ್ಟೇ ಕಷ್ಟವಾಗಲಿ, ಎಂತಹ ಅನರ್ಥವೇ ಸಂಭವಿಸಲಿ ಆಶ್ರಿತರು ಅವರಿಂದ ದುಃಖಕ್ಕೀಡಾಗಕೂಡದು, ಇದೇ ಅವರ ಸಂಕಲ್ಪವಾಗಿದ್ದಿತು. ಆಚಾರ್ಯರ ಗುಣ, ಗೌರವ, ಪ್ರತಿಭೆಗಳನ್ನು ಕೇಳಿದ್ದ ಮಹನೀಯರಾರಾದರೂ ಅವರನ್ನು ನೋಡಬಂದರೆ ತಮ್ಮ ನಟವರ್ಗವನ್ನೆಲ್ಲ ತೋರುತ್ತಾ 'ನೋಡಿ, ಎಷ್ಟು ದೊಡ್ಡ ಸಂಸಾರ ನನ್ನದು--ನೂರುಜನ ದೊಡ್ಡಮಕ್ಕಳು' ಎಂದು ಉಕ್ಕಿಬರುತ್ತಿದ್ದ ಒಲವನ್ನು ತೋರುತ್ತಾ ಅಂದು ಬಿಡುವರು. ತಮಗೆ ಯಾರಾದರೂ ಗೆಳೆಯರು ತಿಂಡಿತಿನಿಸುಗಳನ್ನು ತಂದಿ ತ್ತರೆ ಬಳಗವೆಲ್ಲಕ್ಕೂ ಹಂಚಿ ಮಿಕ್ಕದ್ದನ್ನೇ ತಾವು ತಿನ್ನಬೇಕು. ಆಚಾ ರ್ಯರ ನಟನಕೌಶಲ್ಯಕ್ಕೆ ಬೆರಗಾದ ಪ್ರೇಕ್ಷಕವರ್ಗವು ಸುವರ್ಣಪದಕ, ಆಭರಣಗಳನ್ನಿತ್ತರೆ ನಟವರ್ಗದಲ್ಲಿ ಯಾವನೋ ಒಬ್ಬನ ಉಪಯನಕ್ಕೋ, ವಿವಾಹಕ್ಕೋ, ಸಂಸಾರತಾಪತ್ರಯಕ್ಕೋ ಅದು ವಿನಿಯೋಗವಾಗಬೇಕು. ಇಂತು ಆಚಾರ್ಯರಿಗೂ, ಅವರ ನಟವರ್ಗಕ್ಕೂ ಒಂದು ಅಪೂರ್ವವಾದ ವೈಯಕಸಂಬಂಧವೂ ಬೆಳೆದುಹೋಗಿತ್ತು.

ಆಚಾರ್ಯರಿಗೆ ಎಲ್ಲರಮೇಲೂ ಒಂದೇ ಬಗೆಯ ಅನುರಾಗವಾದರೂ, ಶಾಮಣ್ಣನನ್ನು ಕಂಡರೆ ಹೆಚ್ಚು ಗೌರವ. ಅವರ ಮಂಡಳಿಯಲ್ಲಿ ಶಾಮಣ್ಣನೇ ಸಂಗೀತ ಅಧ್ಯಾಪಕ ಮತ್ತು ಆಚಾರ್ಯರಾನಂತರ ಬರುತ್ತಿದ್ದ ಮುಖ್ಯಪಾತ್ರ ಗಳನ್ನಭಿನಯಿಸುತ್ತಿದ್ದ ನಟ. ಆಚಾರ್ಯರಿಗೆ ಹೋಲಿಸಬಹುದಾದ ರೂಪ

ಲಾವಣ್ಯಗಳೂ, ಅಭಿನಯ ಕೌಶಲ್ಯವೂ ಶಾಮಣ್ಣನಲ್ಲಿರದಿದ್ದರೂ ಅವರಿಗೆ ಎಡಗೈ, ಬಲಗೈಯನ್ನುವಂತಹ ಹಾಡುವ ಯೋಗ್ಯತೆ ಅವನಲ್ಲಿತ್ತು. ಮರೆಯಲ್ಲಿ ನಿಂತು ಶಾಮಣ್ಣ ಹಾಡುತ್ತಿದ್ದರೆ ಆಚಾರ್ಯರೇ ಹಾಡುತ್ತಿರುವರೋ ಎಂದು ಭ್ರಮೆಗೊಳ್ಳುವ ಹಾಗಾಗುತ್ತಿತ್ತು. ಎಳೆಯ ಮಗುವಿನಿಂದ ಸಾಕಿ, ಸಲಹಿ, ಹಾಡುಗಾರಿಕೆಯನ್ನು ಹೇಳಿಕೊಟ್ಟು ಸ್ವಂತ ಮಗನಿಗಿಂತಲೂ ಹೆಚ್ಚಿನ ಆದರದಿಂದ ತನ್ನನ್ನು ಆಚಾರ್ಯರು ನೋಡಿಕೊಂಡು ಬಂದಿರುವುದು ಶಾಮಣ್ಣನಿಗೆ ಚೆನ್ನಾಗಿ ಮನವರಿಕೆಯಾದ ವಿಷಯ. ಕೆಟ್ಟವೇಳೆಗಳಲ್ಲಿ ಇತರ ನಟರು ಆಚಾರ್ಯರಿಗೆ ಎದುರುಹೇಳಿ, ಕೋಪದಿಂದ ಮಂಡಳಿಯನ್ನು ಬಿಟ್ಟುಹೋಗುತ್ತಿದ್ದರೂ, ಶಾಮಣ್ಣನು ಅವರನ್ನು ಅನುಸರಿಸುತ್ತಿರಲಿಲ್ಲ. ತ್ರಿಕರಣಪೂರ್ವಕವಾಗಿ ಆಚಾರ್ಯರನ್ನೇ ನಂಬಿ, ಅವರ ಸೇವೆಯನ್ನೇ ನಮ್ರವಾಗಿ ಒಪ್ಪಿಕೊಂಡು, ಅವರ ಮೆಚ್ಚಿನ ಶಿಷ್ಯನಾಗಿದ್ದನು. ಶಾಮಣ್ಣನು ಬಹು ಶಾಂತ ಸ್ವಭಾವದ ಮನುಷ್ಯ. ಅವನಿಗೆ ಆಗ್ರಹ ಬರುತ್ತಿದ್ದುದು ಎರಡೇ ವಿಷಯಗಳಿಗೆ—ತನ್ನ ಗುರುವನ್ನು ಯಾರಾದರೂ ಹಳಿದರೆ ಇಲ್ಲವೆ ತನ್ನನ್ನು ಗುರುವಿಗಿಂತಲೂ ಹಿರಿಯನೆಂದು ಪ್ರಶಂಸಿದರೆ! ಆದರೆ ಮಿಕ್ಕ ನಟರಲ್ಲಿಲ್ಲದ ಒಂದು ದುಷ್ಟ ಅಭ್ಯಾಸವು ಮಾತ್ರ ಎಂಟನೆಯ ಮನೆಯ ಶನಿಯಂತೆ ಶಾಮಣ್ಣನ ಬೆನ್ನು ಬಿದ್ದಿತ್ತು! ನಿಸ್ಸೀಮ ಸೆರೆಕುಡುಕನೆಂದು ಶಾಮಣ್ಣನ ಖ್ಯಾತಿಯು ಹಬ್ಬಿತ್ತು. ಕುಡಿತದ ಮಬ್ಬಿನಿಂದ ಒಮ್ಮೊಮ್ಮೆ ಹೇಯಕೆಲಸಗಳನ್ನೂ ಮಾಡಿ ಬಹು ನೊಂದಿದ್ದನು. ಆದರೇನು? ಒಮ್ಮೆ 'ನಿಷಾ' ದೇವಿಯ ಕೈಹಿಡಿಯಿತೆಂದರೆ ಅಗ್ನಿಸಾಕ್ಷ್ಯವಾಗಿ ಪರಿಣಯವಾದ ಹೆಂಡತಿಯೂ ಗೌಣವಾಗುತ್ತಾಳೆಂಬುದು ಅವನ ಜೀವನದಲ್ಲಿಯೇ ದೃಷ್ಟಾಂತಗೊಂಡಿತ್ತು. ಎಷ್ಟೋ ಸಾರಿ ಈ ಹಾಳು ಅಭ್ಯಾಸವನ್ನು ಬಿಡಬೇಕೆಂದು ಮನಸ್ಸುಮಾಡಿ ನಿರ್ಧಾರವನ್ನು ಮುಂದುವರಿಸುವ ಮನೋದಾರ್ಢ್ಯವಿಲ್ಲದೆ ಸುಮ್ಮನಾಗಿ ಹೋಗಿದ್ದನು.

೨

ದಕ್ಷಿಣದೇಶಗಳ ದಿಗ್ವಿಜಯಕ್ಕೆ ಹೋಗಿದ್ದ ಆಚಾರ್ಯರು ಬೆಂಗಳೂರಿಗೆ ಬಂದು ೩—೪ ವರ್ಷಗಳಾಗುತ್ತಾ ಬಂದಿತ್ತು. ಬೆಂಗಳೂರಿನ ರಸಿಕರು, ವರ್ತಕರು, ಸರ್ಕಾರಿ ನೌಕರರು—ಎಲ್ಲರೂ ಹತ್ತಾರುಬಾರಿ ಆಹ್ವಾನಗಳನ್ನು ಕಳುಹಿಸಿದ್ದರು. ಆದರೆ ಆಚಾರ್ಯರ ಆರೋಗ್ಯ ಕೆಡುತ್ತಾ ಬಂದಿದ್ದುದರಿಂದ ದಕ್ಷಿಣಾದಿ ಪ್ರವಾಸವನ್ನು ಮುಗಿಸಿಕೊಂಡು ಮೈಸೂರಿನಲ್ಲಿಯೇ ಮೊಕ್ಕಾ

ವನ್ನು ಹೊಡಿಬಿಟ್ಟಿದ್ದರು. ದಿನದಿನಕ್ಕೆ ಆರೋಗ್ಯ ಕೆಡುತ್ತಿದ್ದಿತು; ದಿನದಿನಕ್ಕೆ ಬೆಂಗಳೂರಿನ ಮಹಾಜನರ ಒತ್ತಾಯವು ಹೆಚ್ಚುತ್ತಿದ್ದಿತು. ತಮ್ಮ ಆರೋಗ್ಯವನ್ನು ನಿರ್ಲಕ್ಷ್ಯಮಾಡಿ ಬೆಂಗಳೂರಿಗೆ ಮಂಡಳಿಯೊಂದಿಗೆ ಹೊರಡಲು ಆಚಾರ್ಯರು ಸಿದ್ಧರಾಗಿದ್ದರು—ಆದರೆ ಕಂಪನಿಯ ಬಂಧುಗಳು ತಿಳಿತಿಳಿದು ಪ್ರತ್ಯುಪಿಷ್ಟೆಡೆಗೆ ಆಚಾರ್ಯರನ್ನು ಕಳುಹಿಸಲೊಪ್ಪಲಿಲ್ಲ; ಹಾಗೂ ಹೀಗೂ ತುಯ್ಯುತ್ತಾ ಆರುತಿಂಗಳು ಮೈಸೂರಿನಲ್ಲಿಯೇ ಕಳೆದುಹೋಯಿತು. ಆಚಾರ್ಯರ ಆರೋಗ್ಯವು ಗುಣಮುಖವಾದಂತೆ ಕಂಡುಬಂದಿತು. ಮಂಡಳಿಯು ಬೆಂಗಳೂರಿಗೆ ಬಂದು ಬಿಟ್ಟಿತು.

‘ಲಲಿತ ಕಲಾಸೇವಾ’ ನಾಟಕ ಸಭೆಯ ಸ್ವಂತ ನಾಟಕ ಶಾಲೆಯಲ್ಲಿಯೇ ನಾಟಕವಾರಂಭವಾಗಬೇಕಾಗಿದ್ದಿತು. ಇದು ಮೊದಲಿನಿಂದಲೂ ನಡೆದು ಬಂದ ಶಿಷ್ಟಾಚಾರ ಮಾತ್ರವೇ ಅಲ್ಲದೆ ಅನುಕೂಲಾಚರಣೆಯೂ ಆಗಿದ್ದಿತು. ಆಚಾರ್ಯರ ನಾಟಕಗಳಿಗೆ ಬೇಕಾದಷ್ಟು ಸಾಮಾನುಗಳು ಮತ್ತೆ ಯಾವ ಕಂಪನಿಯ ನಾಟಕಗಳಿಗೂ ಬೇಕಾಗುತ್ತಿರಲಿಲ್ಲ. ಅಂತೇ ಇತರ ನಾಟಕ ಶಾಲೆಗಳಲ್ಲಿ ಅವರ ಸಾಮಾನುಗಳು ಹಿಡಿಸುತ್ತಲೇ ಇರಲಿಲ್ಲ. ಎಲ್ಲ ಪೂರ್ವಸಿದ್ಧತೆಗಳೂ ಮುಗಿಯಲು ಒಂದುವಾರ ಹಿಡಿಯಿತು. ಕೊನೆಗೊಂದು ಶುಭದಿವಸವನ್ನು ಗೊತ್ತುಮಾಡಿ ಅಂದು ‘ಶಾಕುಂತಲಾ’ ನಾಟಕವನ್ನಾರಂಭಿಸಿ ಮೂರು ತಿಂಗಳಿಗೆ ಕಮ್ಮಿಯಿಲ್ಲದಂತೆ ಬೆಂಗಳೂರಿನಲ್ಲಿಯೇ ಇರಬೇಕೆಂದು ನಿಶ್ಚಯವಾಯಿತು.

ನಟರೆಲ್ಲರಿಗೂ ಉತ್ಸಾಹದ ಮೇಲೆ ಉತ್ಸಾಹ. ಊಟಗಳ ಮೇಲೆ ಊಟ. ತಿಂಡಿಗಳ ಮೇಲೆ ತಿಂಡಿ. ಹುಡುಗರು ಹರ್ಷವಾಗಿದ್ದು ತಮ್ಮತಮ್ಮ ಕೆಲಸಗಳನ್ನು ಚೆನ್ನಾಗಿ ಮಾಡಲೆಂದು ಆಚಾರ್ಯರೇ ಕೊಡುತ್ತಿದ್ದ ಔತಣ, ಸಮಾರಾಧನೆಗಳಲ್ಲದೆ ನಾಟಕದ ಹುಡುಗರೆಂದು ಮಹಾಜನರಲ್ಲಿ ಕೆಲ ರಸಿಕರು ಅವರಿಗೆ ನಿಬ್ಬರ ಬರುವವರೆಗೆ ಸತ್ಕರಿಸುತ್ತಿದ್ದರು. ರಂಗದಮೇಲೆ ಮಹಾಪತಿವ್ರತೆಯರಾದ ಸೀತಾ, ಸಾವಿತ್ರಿ, ದಮಯಂತಿಯರ ಭೂಮಿಕೆಗಳನ್ನಭಿನಯಿಸುವ ನಟಿಯು ನಿತ್ಯಜೀವನದಲ್ಲಿಯೂ ಹಾಗೆಯೇ-ಪತಿವ್ರತೆಯಾಗಿಯೇ ಇರಬೇಕೆಂದು ಆಶಿಸುವುದು ಮಾನವೀಯ ದೌರ್ಬಲ್ಯಗಳಲ್ಲಿಯೊಂದು—ಹಾಗೆಯೇ ರಂಗದಮೇಲೆ ರಂಗುರಂಗಿನಿಂದ ರಾರಾಜಿಸುವ ನಟರು ರಂಗದ ಹೊರಗೂ ಹಾಗೆಯೇ ಇರುತ್ತಾರೆಂದು ಜನವರ್ಗವು ನಂಬಿತ್ತು. ಸ್ತ್ರೀಭೂಮಿಕೆ

ಗಳನ್ನಭಿನಯಿಸುವ ಹುಡುಗರ ಮೇಲೆ ಒಂದು ಬಗೆಯ ಅನುರಾಗವೂ, ಶಾಮಣ್ಣನಂತಹ ನಟರ ಬಗ್ಗೆ ಒಂದು ಬಗೆಯ ತಿರಸ್ಕಾರವೂ ಬೆಳೆದಿತ್ತು. ಮನೆಯ ಸುಪ್ಪತ್ತಿಗೆಗಿಂತಲೂ ಬೀದಿಯ ಚರಂಡಿಗಳೇ ಮೆದುವಾಗಿ ಶಾಮಣ್ಣನು ತನ್ನ 'ಸ್ವರ್ಗೀಯ ವೇಳೆ'ಗಳಲ್ಲಿ ಕಾಣುತ್ತಿದ್ದುದೂ ಒಂದು ಕಾರಣವಿರಬಹುದು. ಆದರೆ ಆಚಾರ್ಯರ ಬಗ್ಗೆ ಜನವರ್ಗಕ್ಕೆ ಒಂದೇ ಬಗೆಯ ಗೌರವಾನುರಾಗಗಳು ಅಚ್ಚಳಿಯದಿತ್ತು. ಅವರು ಬೀದಿಯಲ್ಲಿ ಹೋಗುತ್ತಿದ್ದರೆ ಎರಡು ಸಾಲುಗಳಲ್ಲಿಯೂ ಜನರು ನಿಂತು ಮಹಾತ್ಮಾ ಗಾಂಧಿಯವರಂತಹ ಮಹನೀಯರನ್ನು ಕಣ್ತುಂಬ ನೋಡಿ, ಜಯಜಯಕಾರ ಮಾಡುವಂತೆ ಘೋಷಿಸುತ್ತಿದ್ದರು. ದೀನರ ವರ್ಗವಂತೂ ಆಚಾರ್ಯರನ್ನು ಎಡೆಬಿಡದೆ ಕಾಡಿಸುತ್ತಿದ್ದರೂ ಆಚಾರ್ಯರೊಮ್ಮೆಯೂ ಬೇಸರಗೊಳ್ಳದೆ ಬೇಡುವವನಿಗಿಂತಲೂ, ಕೊಡುವವನು ದೀನನು ಎಂಬ ಸರಳ ಹೃದಯದಿಂದ ಆರ್ತರ ತೃಷೆಯನ್ನು ಹಿಂಗಿಸುತ್ತಿದ್ದರು.

ನಾಟಕವೂ, ಆಡುವ ದಿನವೂ ಎಲ್ಲವೂ ನಿಶ್ಚಯವಾಗಿ ಹೋಗಿದೆ. ಅಧ್ಯಕ್ಷಸ್ಥಾನವನ್ನು ಆರಂಭದ ದಿವಸ ಪ್ರಧಾನ ನ್ಯಾಯಸ್ಥಾನದ ನ್ಯಾಯಾಧೀಶರು ಅಲಂಕರಿಸಲೊಪ್ಪಿದ್ದರು—ಆದರೆ.........ಆಚಾರ್ಯರ ಮನದಲ್ಲಿ ದುಗುಡ........ಒಂದು ಅಪೂರ್ವವಾದ ಕಳವಳ........ಸಹಸ್ರಾರು ಜನರು ಬರುವರು, ಅವರೆದುರಿಗೆ ಹೇಗೆ ಆಡುವುದು ಎಂಬ ಭೀತಿಯಿಂದಲ್ಲ. ಮುಂಬಯಿಯ ವಿಕ್ಟೋರಿಯಾ ನಾಟಕಶಾಲೆಯು ಒಡೆಯುವಷ್ಟು ಪ್ರೇಕ್ಷವರ್ಗಕ್ಕಲ್ಲಿ ಅಭಿನಯಿಸಿ 'ಸೈ' ಎನಿಸಿಕೊಂಡದ್ದಾಗಿದೆ.......ನಾಟಕ ಕೆಟ್ಟುಹೋಗಬಹುದೆಂದೇ? ಆ ಭಯಕ್ಕೂ ಅವಕಾಶವಿಲ್ಲ. ಶಾಕುಂತಲವು ಮಂಡಳಿಯ ಹಳೆಯ ನಾಟಕ, ನಟರೆಲ್ಲರೂ ಚೆನ್ನಾಗಿ ನುರಿತವರು, ಜೊತೆಗೆ ದುಷ್ಯಂತ ಭೂಮಿಕೆಯು ಆಚಾರ್ಯರ ಪ್ರೇಮಾಸ್ಪದವಾದದ್ದು. ಆಚಾರ್ಯರೇ ಕುಳಿತು ಯೋಚಿಸಿ ನೋಡಿದರು ದುಗುಡವೇತಕ್ಕೆಂದು—ಬಗೆಹರಿಯದಾಯಿತು. ಆಕಸ್ಮಿಕವಾಗಿ ಮನಸ್ಸಿನಲ್ಲೊಂದು ಕಳವಳದ ಕಾರ್ಮೋಡವು ಮುಸುಕಿತೆಂದರೆ ಅದನ್ನು ಕ್ಷಿಪ್ರದಲ್ಲಿಯೇ ನಿವಾರಿಸುವುದು ಬಹು ಕಷ್ಟಸಾಧ್ಯವಾದ ಕೆಲಸವಾಗುತ್ತದೆ. ಒಣಭಯಕ್ಕೆ ಮನಕೊಡುವುದು ಧೀರನ ಲಕ್ಷಣವಲ್ಲವೆಂದರಿತಿದ್ದ ಆಚಾರ್ಯರು ದುಗುಡವನ್ನು ಮರೆಯಲೆತ್ನಿಸಿದರು.

೩

ನಾಟಕವು ರಾತ್ರಿ ಹತ್ತು ಘಂಟೆಗೆ ಆರಂಭವಾಗಬೇಕು. ಎಂಟು ಘಂಟೆಗೆ ನಟರೆಲ್ಲರೂ ಮಂದಿರವನ್ನು ಸೇರಿ ತಮ್ಮ ತಮ್ಮ ಭೂಮಿಕೆಗಳಲ್ಲಿ ಸಿದ್ಧರಾಗುತ್ತಿದ್ದಾರೆ. ಸುಮಾರು ಒಂಭತ್ತು ಘಂಟೆಯವೇಳೆಗೆ ಮಂದಿರವು ತುಂಬಿಹೋಗಿದೆ-ಕಿಕ್ಕಿರಿಯುವಂತೆ ಜನಸಂದಣಿ. ಅಕ್ಕಪಕ್ಕದ ಹಳ್ಳಿಯೂರುಗಳಿಂದೆಲ್ಲಾ ಜನರು ಆಚಾರ್ಯರ ಕಲಾಕೌಶಲ್ಯವನ್ನು ನೋಡುವ ಉತ್ಸಾಹದಿಂದ ಬಂದು ನೆರೆದಿದ್ದಾರೆ. ಆಚಾರ್ಯರೂ ಭೂಮಿಕೆಯನ್ನು ಧರಿಸುವ ಉದ್ಯೋಗದಲ್ಲಿದ್ದರು. ಶಾಮಣ್ಣನೇ ಸೂತ್ರಧಾರ. ೯ ಘಂಟೆಯಾಗುತ್ತಾ ಬಂದರೂ ಅವನ ಸುಳಿವಿಲ್ಲ. ಅನಂತರ ಕಣ್ವನ ಭೂಮಿಕೆಯನ್ನೂ ಅವನೇ ನಿರ್ವಹಿಸಬೇಕಾಗಿತ್ತು. ನಟರೆಲ್ಲರೂ ಚಿಂತಾಕುಲರಾದರು—ಮೊದಲನೆಯ ದಿವಸವೇ ಇವನು ಹೀಗೆ ಮಾಡುವುದೆ? ಆಚಾರ್ಯರೂ ದುಃಖದಿಂದ ನಿಟ್ಟುಸಿರ್ಗರೆಯುತ್ತಿದ್ದರು, ಅಷ್ಟರಲ್ಲಿ ಸುರಾಪಾನದಿಂದ ಮದಿಸಿದ ಶಾಮನು ಕೈಯ್ಯಲ್ಲಿ ಅರ್ಧ ಉಳಿದಿದ್ದ 'ವ್ಹಿಸ್ಕಿ' ಶೀಷೆಯನ್ನು ಹಿಡಿದು, ತೂರಾಡುತ್ತಾ ರಂಗಮಂದಿರವನ್ನು ಪ್ರವೇಶಿಸಿದನು. ಅಭ್ಯಾಸಬಲದಿಂದ ಮದಿರೆಯು ಶಾಮಣ್ಣನ ಅಧೀನಳಾಗಿದ್ದಂತಿದ್ದಿತು—ಸ್ಮೃತಿ ತಪ್ಪಿರಲಿಲ್ಲ—ಆದರೆ ಬಾಯಲ್ಲಿ ಒಮ್ಮೊಮ್ಮೆ ಹೇಸಿಗೆಯ ಮಾತುಗಳು ಅಸ್ಪಷ್ಟವಾಗಿ ಬರುತ್ತಿದ್ದವು. ನಟರೆಲ್ಲರೂ ಸಿದ್ಧಗೊಂಡಿದ್ದುದನ್ನು ನೋಡಿ ಶಾಮನು ಸಹಜ ಗುಣಬಲದಿಂದ ಬಣ್ಣಗಳ ಕೋಣೆಯಕಡೆ ತೆರಳಿದನು.

ಆಚಾರ್ಯರು ಬಣ್ಣದ ಕೆಲಸವನ್ನು ಮುಗಿಸಿದ್ದರು. ಅವರ ಮುಖದಲ್ಲಿ ಅಸಹನೀಯವಾದ ಯಾತನೆಯು ಕಂಡುಬರುತ್ತಿದ್ದಿತು. ನಟರು ಅದೇನೆಂದು ತಿಳಿಯಲಾರದೆ ಶಾಮನ ದುರ್ನಡತೆಯ ವಿಚಾರದಲ್ಲಿ ಕೋಪಗೊಂಡಿದ್ದಾರೆಂದು ಬಗೆದರು—ಆಚಾರ್ಯರು ಹಾಗೆಯೇ ಸುಖಾಸನದಮೇಲೆ ಒರಗಿ, ಪಕ್ಕದಲ್ಲಿದ್ದ ನಟರಿಗೆ ' ತಕ್ಷಣ ಯಾರಾದರೊಬ್ಬ ಡಾಕ್ಟರಿಗೆ ಹೇಳಿ ಕಳುಹಿಸಿ ' ರೆಂದರು. ಭಯಗೊಂದಲಗಳು ಮೂಡಿದವು. ಪ್ರೇಕ್ಷಕವರ್ಗದಲ್ಲಿಯೇ ಇದ್ದ ಡಾಕ್ಟರೊಬ್ಬರನ್ನು ನಟರು ಕರೆತಂದರು. ಡಾಕ್ಟರು ಪರೀಕ್ಷೆಯನ್ನು ಮುಗಿಸಿ ' ಈ ಕ್ಷಣ ಆಸ್ಪತ್ರೆಗೆ ಹೊರಡಬೇಕು ಸಾರ್—ಇಲ್ಲದಿದ್ದರೆ ತುಂಬಾ ಅಪಾಯಕರ ' ಎಂದು ಹೇಳಿದರು. ದಿಕ್ಕು ಯಾರಿಗೂ ತೋರದಂ

ಶಾಯಿತು. ಮುಂದೇನುಗತಿ?—ಮುಂದಿನ ಮಾತಂತಿರಲಿ,—ಇಂದೇನು ಗತಿ? ಕ್ಷಣಕಾಲ ಚಿಂತಿಸಿ ನಟರಾಜರು 'ಶಾಮಾ' ಎಂದು ಕರೆದರು. ಶಾಮಣ್ಣನಿಗೆ ಮತ್ತು ತುಸು ಕಡಿಮೆಯಾಗಿದ್ದಿತು. ಅವನು ಹತ್ತಿರ ಬಂದು ಮೊಣಕಾಲೂರಿ ಧಣಿಯ ಸಮೀಪದಲ್ಲಿ ತಪ್ಪಿತಸ್ಥ ಮಗುವಿನಂತೆ ಕುಳಿತನು. ಆಚಾರ್ಯರು ಆದರದಿಂದ ತಲೆಯಮೇಲೆ ಕೈಯಾಡಿಸುತ್ತಾ 'ಶಾಮಾ ನನಗೆ ಮೈಲಿ ಹಿತವಿಲ್ಲ. ಇವತ್ತು ನೀನು ಈ ವೇಷ ಹಾಕಿಕೋ' ಎಂದು ಹೇಳಲು, ಶಾಮಣ್ಣನಿಗೆ ಕಣ್ಣುಗತ್ತಲೆಯಿಡುತ್ತಾ ಬಂದಿತು. ಆಚಾರ್ಯರ ಖಾಸಾ ಭೂಮಿಕೆಯನ್ನು ಅದೂ ಇಂದು ತಾನು ಧರಿಸುವುದೇ? ಏನನ್ನೋ ಹೇಳಬೇಕೆಂದು ಹವಣಿಸಿದನು. ಅಷ್ಟರಲ್ಲಿ ತಡೆಯಿಕ್ಕಿ ಆಚಾರ್ಯರು 'ನೀನು ಹೇಳಬೇಕೆಂದಿರುವುದು ಗೊತ್ತಾಯ್ತು. ಹೆದರಬೇಡ, ನಾನಿದ್ದೇನೆ ಬೆನ್ನುಗಾವಲಿಗೆ, ಹೋಗೋ ರಾಜಾ' ಎಂದು ಬೆನ್ನು ಚಪ್ಪರಿಸಿ, ನಟರನ್ನೆಲ್ಲಾ ಕರುಣಾದೃಷ್ಟಿಯಿಂದ ನೋಡಿ ಇದ್ದ ಸ್ಥಿತಿಯಲ್ಲಿಯೇ ರಂಗದಮೇಲೆ ಪ್ರವೇಶ ಮಾಡಿದರು. ಜನತೆಯ ಅಚ್ಚರಿಗೆ ಮಿತಿಯುಂಟೇ—ತಮ್ಮ ಕನಸಿನ ಮೂರ್ತಿ–ಈ ವೇಷದಲ್ಲಿ—ಕರತಾಡನದ ಸಂರವವು ಕಡಿಮೆಯಾದಮೇಲೆ ಬಹು ಪ್ರಯಾಸದಿಂದ,

'ಮಹಿಳೆಯರೇ, ಮಹನೀಯರೇ, ನನ್ನ ದೇಹದಲ್ಲಿ ದಾರುಣವಾದ ವೇದನೆಯಾಗುತ್ತಿದೆ. ಇಂದು ದುಷ್ಯಂತನಾಗಿ ನಿಮ್ಮ ಮುಂದೆ ರಾಜಿಸಿ ನಿಮ್ಮನ್ನು ರಂಜಿಸುವ ಸುಯೋಗವು ನನಗಿಲ್ಲವಾಗಿ ತುಂಬಾ ವಿಷಾದಿಸುತ್ತೇನೆ. ನನ್ನ ಶಿಷ್ಯ ಶಾಮಣ್ಣ ಇಂದು ದುಷ್ಯಂತನ ಪಾತ್ರವನ್ನಭಿನಯಿಸುತ್ತಾನೆ. ತಾವುಗಳು ನನ್ನ ಬಗ್ಗೆ ತೋರುತ್ತಿದ್ದ ಆದರವನ್ನೇ ಅವನಿಗೂ ತೋರಬೇಕೆಂದು ಬೇಡುತ್ತೇನೆ. ಗುಣಹೊಂದಿದೊಡನೆಯೇ ಎಂದಿನಂತೆ ತಮ್ಮ ಸೇವೆಗೆ ಸಿದ್ಧನಾಗುತ್ತೇನೆ'

ಎಂದುಹೇಳಿ ಕಿವಿಯನ್ನು ಕೊರೆಯುವಂತಿದ್ದ ಕರತಾಡನ ರವದ ಮಧ್ಯೆ ನಿಷ್ಕ್ರಮಿಸಿಬಿಟ್ಟರು.

೪

ನಾಟಕವು ಆರಂಭವಾಯಿತು. ಸೂತ್ರಧಾರನು ಬಂದು ಮಂಗಳಾಚರಣೆಯನ್ನು ಮುಗಿಸಿ ಹೊರಡಲು ವನಪ್ರದೇಶದ ತೆರೆಯು ಕಂಡುಬಂದಿತು.

ಪ್ರೇಕ್ಷಕರೆಲ್ಲರೂ ಎವೆಯಿಕ್ಕದೆ ನೋಡುತ್ತಿರುವಂತೆ ದುಷ್ಯಂತರಾಯನು ಧನುರ್ಧಾರಿಯಾಗಿ ಆಶ್ರಮದ ಹುಲ್ಲೆಯನ್ನಟ್ಟಿಸಿಕೊಂಡು ಮಿಂಚಿನಂತೆ ಪ್ರವೇಶಿಸಿದನು. ರೋಮಾಂಚಿತರಾದ ಪ್ರೇಕ್ಷಕರು ದುಷ್ಯಂತಭೂಮಿಕಾಧಾರಿಯ ಶೈಲಿಯನ್ನು ನೋಡಿ ಆಚಾರ್ಯರೇ ಮನಸ್ಸನ್ನು ಬದಲಾಯಿಸಿ ಪ್ರವೇಶಿಸಿದರೆಂದು ಜಯಜಯಕಾರಮಾಡಿದರು. ನಟನು 'ಹಾರಿತು ಹಾರಿತು ಷಡಮೃಗಪೋತ' ಹಾಡುತ್ತಾ ಪ್ರೇಕ್ಷಕರ ಕಡೆ ತಿರುಗಲು ಶಾಮಣ್ಣನೆಂದು ಗೊತ್ತಾಗಿ ಹಚ್ಚಿ ಶಿಲಾಶಿಲ್ಪಿಗಳಂತೆ ನೋಡುತ್ತ ಕುಳಿತರು.

ನಾಟಕವು ತಡೆಯಿಡೆಯಿಲ್ಲದೆ ಸಾಗಿತು. ಮದಿರಾಮೋಹಿತನಾಗಿದ್ದ ವೇಳೆಗಳಲ್ಲಿ ಶಾಮಣ್ಣನನ್ನು ಕಂಡು ಪರಿಹಾಸ್ಯಮಾಡಿದ್ದವರೆಲ್ಲರೂ ಬೆಕ್ಕಸಬೆರಗಾದರು. 'ದುಷ್ಯಂತನ ಪಾತ್ರವನ್ನು ರಂಗಾಚಾರ್ಯರಿಗಿಂತಲೂ ಹೆಚ್ಚಿನ ಸಾಮರ್ಥ್ಯದಿಂದ ಇಂದು ಅಭಿನಯಿಸುತ್ತಿರುವನು ನಮ್ಮ ಶಾಮನೇ' ಎಂದು ಮಂಡಳಿಯ ನಟರೇ ಅಚ್ಚರಿಪಡುತ್ತಿದ್ದರು. ಕಂದವೃತ್ತಗಳ ಹಾಡಿಕೆಯಲ್ಲಿ ಮಾತ್ರವೇ ಅಲ್ಲದೆ, ತನ್ನ ಸತ್ವಪ್ರಪಂಚಕ್ಕೆ ಸೇರದಿದ್ದ ಅಭಿನಯ ರಂಗದಲ್ಲಿಯೂ ಅಂದು ಶಾಮಣ್ಣನಿಂದ ಅನ್ಯಾದೃಶ್ಯ ಕೌಶಲ್ಯವು ಕಂಡುಬರುತ್ತಿದ್ದಿತು. 'ಶಾಮನಿಗೇನೋ ಬಂದಿದೆ ಇವತ್ತು ಆವೇಶ' ಎಂದು ಗ್ಯಾಲರಿ ಪ್ರಭುಗಳು ಗುಸುಗುಟ್ಟುತ್ತಿದ್ದರು. 'ನಡೆಯುತ್ತೊಡನೆ ಕುಶಾಗ್ರಮಂ'— 'ಕುಸುಮಶರನೆಂದು ನಿನಗದಾರ್ ಪೆಸರಿಟ್ಟರೋ' ಮೊದಲಾದ ಕಂದಗಳನ್ನು ಶಾಮನಂದು ನಿಲ್ಲಿಸಿದಾಗ ಎಲ್ಲರ ಕಣ್ಣುಗಳಲ್ಲಿಯೂ ಸುಖದುಃಖ ಸಮ್ಮಿಳಿತ ಬಾಷ್ಪಗಳು ಕಾಣಿಸಿಕೊಂಡವು. ಕೇವಲ ವಿಲಾಸಪರರು 'ರಂಗಾಚಾರಿ ಹೋದರೂ ಚಿಂತಿಲ್ಲ. ಅವನಂತಹ ಇನ್ನೊಬ್ಬ ಬಂದ' ಎಂದು ಸಂತಸ ತಾಂತರು. ತುಸು ತಿಳಿಮನಸ್ಸಿನವರು ಶಾಮಣ್ಣನಂತಹ ಶಿಷ್ಯರತ್ನವನ್ನು ಸೃಷ್ಟಿಸಿದ್ದ ಆಚಾರ್ಯರನ್ನು ಮನದಣಿಯೆ ಸ್ತುತಿಸಿದರು. ಅಂತೂ ಒಬ್ಬೊಬ್ಬರ ಮನಸ್ಸು–ಭಾವನೆಗಳು ಒಂದೊಂದು ಬಗೆಯಾಗಿದ್ದರೂ, ಶಾಮಣ್ಣನು ತನ್ನ ಪಾತ್ರವನ್ನು ನಿರ್ವಹಿಸಿದ ವಿಚಾರದಲ್ಲಿ ಎಲ್ಲರೂ ಅವನನ್ನು ಆಚಾರ್ಯರಿಗೆ ಸರಿಸಮನಾದ ಕಲಾವಿದನೆಂದು ಬೆಲೆಗಟ್ಟಿದರು.

ನಾಟಕವು ಮುಕ್ತಾಯದ ಸಮೀಪಕ್ಕೆ ಬಂದಿತು. ಆಗ ಕಂಪನಿಯ ಪರವಾಗಿ ಮ್ಯಾನೇಜರು ಅಧ್ಯಕ್ಷಸ್ಥಾನವನ್ನು ವಹಿಸಲು ಸ್ವಂತಕೆಲಸ ಕಾರ್ಯ

ಗಳನ್ನೆಲ್ಲಾ ಬದಿಗಿಟ್ಟು ಬಂದಿದ್ದ ನ್ಯಾಯಾಧೀಶರನ್ನು ಅಭಿವಂದಿಸಿ, ಮುಂಡ[illegible]ಂಪು ಯಜಮಾನರು ಕ್ಷಿಪ್ರ ಗುಣಹೊಂದಿ ರಂಗಕ್ಷೇತ್ರವನ್ನಲಂಕರಿಸುವ ಭಾಗ್ಯವನ್ನು ದಯಪಾಲಿಸಬೇಕೆಂದು ಭಗವಂತನಲ್ಲಿ ಅನನ್ಯಪ್ರಾರ್ಥಿಸುತ್ತಿದ್ದ ಕಂಪೆನಿಯವರೊಂದಿಗೆ ಪ್ರೇಕ್ಷಕರೂ ಬೆರೆಯಬೇಕೆಂದು ಬೇಡಿ, ಅಧ್ಯಕ್ಷರಿದ್ದ ಲ್ಲಿಗೆ ಬಂದು ಅವರ ಕೊರಳಿಗೆ ಹೂವಿನ ಮಾಲೆಯನ್ನು ಹಾಕಿ ಒತ್ತಟ್ಟಿಗೆ ನಿಂತರು. ಅಧ್ಯಕ್ಷರು ಕರತಾಡನದ ಮಧ್ಯೆ ಎದ್ದು ರಂಗವನ್ನೇರಿ ಅಂದಿನ ನಾಟಕವನ್ನೂ, ಆಚಾರ್ಯರನ್ನೂ ಅಂದಿನ ಪ್ರಧಾನ ನಟನಾದ ಶಾಮಣ್ಣನನ್ನೂ ವಿಶೇಷ ಪ್ರಶಂಸಿಸಿ 'ಶಾಮಣ್ಣನವರು ಕರ್ನಾಟಕ ಕಲಾಕಾಶದಲ್ಲಿ ಮುಂದೆ ನೋಡುವ ರವಿಯು---ಕಲಾಭಿಮಾನಿಗಳೇ, ಈ ಪ್ರತಿಭಾಶಾಲಿಯ ಮೇಲೆ ಕಣ್ಣಿಡಿರಿ-ಈತನನ್ನು ನಿಮ್ಮ ಒಲವಿಗೊಳಗಾಗಿಸಿರಿ. ನಾಡಕಲೆಗಳ ಯೋಗ್ಯ ಸೇವೆಯನ್ನು ಮಾಡುವಂತೆ ಹುರುಪುಗೊಡಿರಿ' ಎಂದು ಆವೇಶ ಯುಕ್ತರಾಗಿ ಹೇಳಿ ತಮ್ಮ ಕೊರಳಹಾರವನ್ನೇ ತೆಗೆದು, ಒಡೆಯನ ಸಂಪೂರ್ಣ ನಂಬಿಕೆ-ದುಷ್ಯಂತ ಪಾತ್ರವನ್ನಭಿನಯಿಸಿದ ಉದ್ವೇಗ--ಈಗ ಮಹಾಜನದ ಮನ್ನಣೆಗಳಿಂದ ತನ್ನಿರವನ್ನೇ ಮರೆತಿದ್ದ ಶಾಮಣ್ಣನ ಕೊರಳನ್ನು ಅಲಂಕರಿಸಹೋದರು. ಹಾರವು ಕೊರಳನ್ನು ಸೇರಬೇಕು-ಆ ಹೊತ್ತಿಗೆ ಸರಿಯಾಗಿ ಕಡಿದುಬಿದ್ದಿತು. ಅಧ್ಯಕ್ಷರು ಅವಾಕ್ಕಾಗಿ ನಿಂತರು. ಅಪಶಕುನವೆಂದು ಶಾಮನೂ, ಇತರ ನಟರೂ ತಲ್ಲಣಿಸಿದರು —ನಾಟಕಶಾಲೆಯು ಶೂನ್ಯತೆಯ ಹಾಹಾಕಾರದ ಘೋಷಣಸ್ವರೂಪವನ್ನು ಪಡೆಯಿತು. ಅಧ್ಯಕ್ಷರು ದುಃಖದಿಂದ ಕಂಬನಿತುಂಬಿ ತಮ್ಮ ಸ್ಥಾನವನ್ನು ಸೇರಿದರು. ಉಳಿದಿದ್ದುದು ಒಂದೇದೃಶ್ಯ-ನಾಟಕವು ಮುಗಿದೂ ಹೋಯಿತು—ಮಂಗಳವನ್ನು ಹಾಡಿದ್ದೂ ಆಯಿತು.

೫

ಶಾಮಣ್ಣನು ಒಳಗೆ ಹೋಗಿ ನೋಡಿದಾಗ ನಟಬಳಗದಲ್ಲಿ ಮುಕ್ಕಾಲು ಪಾಲು ಜನ ಎಲ್ಲಿಯೋ ಹೊರಟುಹೋಗಿದ್ದರು. ರಂಗವೆಲ್ಲವೂ ಅಮಂಗಳತೆಯನ್ನು ಬೀರುತ್ತಿದ್ದಿತು. ರಂಗುಕೋಣೆಯಲ್ಲಿ ಒಬ್ಬಿಬ್ಬ ನಟರು ಬಣ್ಣಗಳನ್ನು ಕಣ್ಣೀರಿನಿಂದೊರೆಸುತ್ತಾ ಕುಳಿತಿದ್ದರು. ಪರಿಸ್ಥಿತಿಯನ್ನೊಮ್ಮೆ ಹರಿಣಿಯಂತೆ ಶಾಮನೀಕ್ಷಿಸಿ ನಟರಲ್ಲೊಬ್ಬನನ್ನು ಕುರಿತು, 'ಏನಾಯಿತೋ-ಗುಂಡೂ—ಅಳುತ್ತಿದ್ದೀರಿ—ನಿಕ್ಕಾದೋರೆಲ್ಲಾ ಎಲ್ಲಿಹೋದರು'?

ಎಂದು ಪ್ರಶ್ನೆ ಕೇಳಿದೊಡನೆಯೇ ಗುಂಡುವಿನ ದುಃಖವಿಮ್ಮಡಿಸಿತು. ಬಿಕ್ಕಿ ಬಿಕ್ಕಿ ಅಳುತ್ತಾ ನಿಂತಿದ್ದ ಅವನನ್ನು ಚೇತನಕ್ಕಲುಗಿಸುತ್ತಾ

'ಏನಾಯಿತೋ ಗುಂಡೂ-ಹೇಳೋ ಮಹಾರಾಯಾ. ನಿನ್ನ ದಮ್ಮಯ್ಯಾ ಅನ್ನುತ್ತೇನೆ' ಅಂದನು.

ಗುಂಡೂ, ಮೆಲ್ಲನೆ ಗಂಟಲು ಸರಿಮಾಡಿಕೊಂಡು ಹೇಳಲಾಗದಿರುವ—ಹೇಳಲಸಹನೀಯವಾಗಿರುವ ವಿಷಯವನ್ನು ಹೇಳಲೇಬೇಕಾಗಿರುವ ದುರ್ಘಟನೆಯನ್ನು ಶಪಿಸುತ್ತಾ

' ಶಾಮೂ, ಧೈರ್ಯತಂದುಕೋ-ಅರ್ಧಘಂಟೆ ಮುಂಚೆ ಆಸ್ಪತ್ರೆಯಿಂದ............... '

' ಹೂ, ಆಸ್ಪತ್ರೆಯಿಂದ...........ಏನಾಯಿತು ? '

' ಆಳು ಬಂದಿದ್ದ—ಯಜಮಾನರು........... '

' ಹೂ, ಯಜಮಾನರು........... '

' ತೀರಿಹೋದರಂತೆ !

' ತೀರಿಹೋದರೇ !!!........... '

ಆಕಾಶವೇ ಕಳಚಿ ತಲೆಯಮೇಲೆ ಬಿದ್ದಂತಾಯಿತು. ದಣಿಯಾಣತಿಯನ್ನು ಪಾಲಿಸಿದ ಒಸಗೆಯನ್ನು ಹೇಳಬೇಕೆಂದು ಉತ್ಸುಕನಾಗಿದ್ದ ಅಣುಗನ ತೊದಲು ಮಾತನ್ನು ಕೇಳಲು ಧಣಿಯೇ ಇಲ್ಲವಾದನು. ಇದೊಂದು ದಿವಸವಿದ್ದಿದ್ದರೆ—ಈ ದಿವಸ ಧಣಿಯಿರಲು ತನ್ನ ಜೀವವನ್ನೇ ಎರವು ಕೊಡಲು ಸಿದ್ಧನಿದ್ದನು. ಆದರೇನು ? ಹುಟ್ಟುಸಾವುಗಳು ಯಾರಧೀನ.

ಈ ದುಃಖದ ಕಾಳರೂಪದ ಮಧ್ಯೆ ಒಂದು ಮುತ್ತು ಕಾಣಿಸಿಕೊಂಡಿತು. ಆ ಅಳಲು ಕತ್ತಲೆಯಮೇಲೆ ನಗೆಯ ಬೆಳದಿಂಗಳು ಹರಿಯಿತು. ' ಧಣಿ ಸತ್ತಿಲ್ಲ ಅವನಾತ್ಮ ಬಂದು ನನ್ನ ದೇಹ ಸೇರಿದೆ—ಅದಕ್ಕೇ ಇವತ್ತು ಮನುಷ್ಯಂತನ ಪಾರ್ಟು ನಾನು ಹಾಗೆ ಮಾಡಿದೆ—ನನಗಿಲ್ಲದಿದ್ದರೆ ಆ ಯೋಗ್ಯತೆಯೆಲ್ಲಿಂದ ಬರಬೇಕು ' ಎಂದಂದುಕೊಂಡಿದ್ದನು............' ಅಹುದಹುದು ' ಎಂಬಂತೆ ಪಕ್ಕದಲ್ಲಿದ್ದ ದೇವಾಲಯದ ಗಂಟೆಗಳ ನಿನಾದವು ಕಿವಿಮುಟ್ಟಿತು. ' ದೇಹದಳಿವನ್ನೇ ಸಾವೆಂದರಿವುದುಂಟೇ ? '



# ಗೆದ್ದವರು ಯಾರು ?

——:——

೧

ಎರಡು ಮೂರು ದಿವಸಗಳ ಹಿಂದೆ ಬಂದ ಮುನಿಸಿನ್ನೂ ಮುಗಿದಿರಲಿಲ್ಲ. ಕಾರಣವು ಕೇವಲ ಕ್ಷುಲ್ಲ; ಗಂಡ ಹೆಂಡಿರ ವ್ಯಾಜ್ಯದ ಕಾರಣಗಳೆಂದಮೇಲೆ ಗಹನವೆನ್ನಲಾದೀತೇ? ಆದರೂವೊಮ್ಮೊಮ್ಮೆ ಪರಿಣಾಮ ವಿಪರೀತವಾಗಿಯೂ ಆಗಿಬಿಡುತ್ತದೆ. ಸೂರಪ್ಪನವರ ಮನೆಯ ಮುಂಜಿಗೆ ಮಗುವನ್ನು ಕರೆದುಕೊಂಡು ಹೋಗಲೇ ಬೇಕೆಂದು ರತ್ನಮ್ಮನ ಹಟ. ಬೇಡ, ಛಳಿಗಾಲ, ಮಗುವಿಗೆ ಸೀತವಾದೀತು ಎಂದು ಮುಕುಂದನ ವಾದ. ಕೊನೆಗೆ ರತ್ನಮ್ಮ ಮಗುವನ್ನು ಕರೆದುಕೊಂಡೇ ಹೋದಳು–ಮಗುವಿಗೆ ಸೀತಾ ಬಂದೇ ಬಂತು–ಮುಕುಂದನ ಮೋರೆಗೆ ಮಸಿಯೂ ಬಳಿದಂತಾಯಿತು. ಮುಕುಂದನಿಗೆ ಈ ಮುಖಭಂಗವೇನು ಮೊದಲನೆಯ ಪ್ರಕರಣವಲ್ಲ. ಆದರೆ ಅಂದಿನ ಪರಿಸ್ಥಿತಿಯು ಸ್ವಲ್ಪ ಮುಕುಂದನನ್ನೇ 'ಸರಿ' ಎನ್ನಿಸುವಂತಿತ್ತೆನ್ನಬಹುದು.

ಮುಕುಂದರಾಯನ ಪರಿಚಯ ಸಾಮಾನ್ಯವಾಗಿ ಇಲ್ಲದವರೇ ಇಲ್ಲವೆನ್ನಬಹುದು. ಸೆಕ್ರೆಟೇರಿಯಟ್‌ನಲ್ಲಿ ನಲವತ್ತೇ ರೂಪಾಯಿಗಳ ಕ್ಲರ್ಕ್ ಹುದ್ದೆಯಲ್ಲಿದ್ದರೂ ದಿವಾನರ ತನಕ ಅವನ 'ಖ್ಯಾತಿ ಕಸ್ತೂರಿಯ ಪರಿಮಳವು' ಹಬ್ಬಿತ್ತು. ವಯಸ್ಸು ೨೦-೨೫ರ ಒಳಗೆ. ವಿದ್ಯಾವಂತ, ರಸಿಕ, ಸಾಹಿತ್ಯದಲ್ಲಿ ಕೊಂಚ ಕೈಯಾಡಿಸಿದವ, ಕೆಲಸದಲ್ಲಿ ಉತ್ಸಾಹಿ, ಗುಣದಲ್ಲಿ ತೆಗೆದು ಹಾಕುವಂತಿರಲಿಲ್ಲ, ನಿಸ್ಪೃಹ ಎಂದಮೇಲೆ ಅವನನ್ನು ಪ್ರೀತಿಸಿ, ಗೌರವಿಸದಿರಲಾದೀತೇ?

ಅಂದು ಕಛೇರಿಯಲ್ಲಿ ಧಣಿಗಳಿಗೆ ಬೇಕಾದ ಯಾವದೋ ಒಂದು 'ಪೇಪರ್' ಸಿಕ್ಕಲಿಲ್ಲ. ಒಡೆಯನ ಕೋಪ ಬಡವನಮೇಲೆ. ಎದುರಿಗಿದ್ದ ಮುಕುಂದನ ಮೇಲೆ ಧಣಿಯವರ ಹಣೆಗಣ್ಣು ತೆರೆಯಿತು....ಕೊಂಚ ಎಚ್ಚರ ತಪ್ಪಿದ್ದ ಮಾತುಗಳೂ ಆಗಿಹೋದವು. ಮನೆಗೆ ಬರುವ ಹೊತ್ತಿಗೆ ಮಗು

ವನ್ನೂ ಎತ್ತಿಕೊಂಡು, ತನ್ನ ಮಾತನ್ನು ನಿರ್ಲಕ್ಷಿಸಿ ರತ್ನಮ್ಮ ಮುಂಜಿ ಮನೆಗೆ ಹೋಗಿಬಿಟ್ಟಿದ್ದಾಳೆ. ನೊಂದು, ಬೆಂದು, ಜೀಸತ್ತು ಮನೆಗೆ ಬಂದರೆ ಹೆಂಡತಿ, ಮಗುವಿನ ಮುಖಕಾಣದಿದ್ದ ದುಃಖವೊಂದುಕಡೆ; ತನ್ನ ಮಾತನ್ನು ಹಾರಿಸಿ ಹೊರಟೇ ಹೋದಳಲ್ಲಾ ಎಂಬ ಕೋಪವೊಂದುಕಡೆ.

ಈ ದುಃಖ ಕೋಪಗಳ ನಡುವೆ ಬಂದ ಬಡ ಕಾಫಿಗೆ ಶಿಕ್ಷೆಯಾಗಿ ಹೋಯಿತು. ಎದ್ದು ಅತ್ತಿಂದಿತ್ತ, ಇತ್ತಿಂದತ್ತ ಹುಚ್ಚನಂತೆ ಅಲೆದಾಡಿದನು. ಏನೇನೋ ಯೋಚಿಸಿದನು. 'ಜವಾನನನ್ನಟ್ಟಿ ಈಗಲೇ ರತ್ನನನ್ನು ಬರಮಾಡಿ ಕೊಂಡು ಹೊಟ್ಟೆಯ ಕೋಪವನ್ನು ಹೊರಗೆಹಾಕಿಬಿಡಲೇ ಛೆ! ಛೆ!! ಹಾಗೆ ಮಾಡಿದರೆ ಅವಳ ನಡತೆಗೆ ತಕ್ಕ ಶಾಸ್ತಿಯಾದಂತಾಗುವುದಿಲ್ಲ' ಎಂದು ಆ ಯೋಚನೆಯನ್ನು ಬಿಟ್ಟುಬಿಟ್ಟನು. ಮರುಕ್ಷಣವೇ ಬೇರೊಂದು ಭಾವನೆ ಹೊರಟಿತು. 'ನನ್ನ ಕಂಡರೆ ಅವಳಿಗೆ ಲಕ್ಷ್ಯವಿಲ್ಲ. ತಾನು ದೊಡ್ಡವರ ಮನೆಯ ಹೆಣ್ಣೆಂದು ಈ ತಿರಸ್ಕಾರ. ನನ್ನಮೇಲೆ ಅವಳಿಗೆ ಸಾಕಷ್ಟು ಪ್ರೀತಿ ಯಿಲ್ಲ' ಎಂಬ ಸಂಶಯಗಳಿಗೀಡಾದನು. ಯಾವ ಶಿಕ್ಷೆಯನ್ನು ವಿಧಿಸಿದರೆ ಮರೆಯಲಾಗದ ತೆರನಲ್ಲಿ ರತ್ನಳಿಗೆ ಬುದ್ಧಿ ಬರುವುದೆಂದು ಯೋಚಿಸಿ ಯೋಚಿಸಿ ಸಾಕಾಗಿ, ಬಗೆಗಾಣದೆ, ತನ್ನ ಸಂಜೆಯಲ್ಲಾ ಇಂತು ಹಾಳಾಯಿತಲ್ಲಾ ಎಂದು ಬಯ್ದುಕೊಂಡಿದ್ದನು. ಎಲ್ಲ ಯೋಚನೆಗಳನ್ನೂ ಪರಿಹರಿಸುವ 'ಸಿನೀಮಾ' ಮಂದಿರದ ಕಡೆ ಕಾಲೆಳೆಯಿತು. ಟಿಕೀಟು ಕೊಂಡು ಒಳಗೆ ಕುಳಿತದ್ದೂ ಆಯಿತು. ಎದುರಿಗೆ ನಡೆಯುತ್ತಿದ್ದ ಆಟವೇ ಒಂದು, ಮುಕುಂದ ನಿಗೆ ಕಾಣುತ್ತಿದ್ದ ನೋಟವೇ ಒಂದು. ತನ್ನ ಮನಸ್ಸಿನ ಬಿಳಿಯ ತೆರೆಯ ಮೇಲೆ ನಡೆಯುತ್ತಿದ್ದ ಕ್ರೋಧ, ರೋಷ, ಶೋಕಗಳ ಚಿತ್ರಗಳು ಒಂದಾಗುತ್ತ ಲೊಂದು ಎದುರಿಗೆ ಕುಣಿಯುತ್ತಿದ್ದವು. ತಕ್ಷಣ ಏನೋ ಯೋಚನೆ ಹೊಳೆ ಯಿತು. ಮುಖದಲ್ಲಿ ನೀರಸವಾದ ನಗುವು ಹರಿಯಿತು; ಮುಖದಲ್ಲಿ ವಿವರ್ಣನಿ ಗಳು ಕಾಣಿಸಿಕೊಂಡವು; ದೇಹಾದಂತ್ಯವೂ ರೋಮಾಂಚನೆಯಿಂದ ಕಂಪಿಸ ತೊಡಗಿತು. ಇಡೀ ದೇಹವನ್ನು ಯಾವನೋ ತನಗಿಂತಲೂ ಬಲಿಷ್ಠನಾದ ವನು ಹಿಡಿದು ಅಲುಗಿಸಿದಂತಾಯಿತು. ಕೆಳಗಿಟ್ಟಿದ್ದ ಟೋಪಿಯನ್ನು ಧರಿಸಿ, ಸಿಗರೇಟೊಂದನ್ನು ಹಚ್ಚಿ, ಕೈಯಲ್ಲಿ ಹಿಡಿದು ಸಿನೀಮಾ ಆಟ ಮುಗಿಯುವುದ ರೊಳಗೇ ಮಂದಿರದಿಂದ ಹೊರಬಿದ್ದು ಎತ್ತಲೋ ಹೊರಟುಬಿಟ್ಟನು.

೨

ಬಿದಿಗೆಯ ಚಂದ್ರಮನ ಬೆಳಕು ಅಂದು ಬಿತ್ತರಿಸಿತ್ತು. ಲೋಕವೆಲ್ಲ ಶಾಂತಿಯ ಪಲ್ಲಂಕವೆಡೆಗೆ ತೆರಳುತ್ತಿತ್ತು. ಗಾಡಿಗಳ ಸಪ್ಪಳವು ನೀರವತೆಯಲ್ಲಿ ಬೆರತುಹೋಗುತ್ತಿದ್ದಿತು. ನಿಸರ್ಗವಲ್ಲಿ ಒಂದು ತೆರನ ಸೌಮ್ಯ ಸೌಂದರ್ಯವು ಒಡಮೂಡಿತ್ತು. ಅರಳಲು ಹೊರಟಿದ್ದ ಮೊಗ್ಗೆಗಳು ತಮ್ಮ ವಿಕಾಸವನ್ನು ನೆನೆನೆನೆದು ಕಿಲಕಿಲನೆ ನಗುತ್ತಿದ್ದವು. ಕಿಲಕಿಲನೆ ನಗಬೇಕೆಂಬ ಮುಕುಂದನ ಆಸೆಯನ್ನು ಯಾವುದೋ ಒಂದು ಭಯದ ತೆರೆಯು ಮುಚ್ಚಿದ್ದಿತು. ಈ ಮಧ್ಯೆ ಮನಸ್ಸಿನಲ್ಲಿ ಅವ್ಯವಸ್ಥೆಯ ಆಡಳಿತ. 'ಮನೆಗೆ' ಹಿಂದಿರುಗುವೆ ಎಂದೊಮ್ಮೆ ಅಂದುಕೊಂಡರೂ, ಕಾಲು ಎಲ್ಲಿಗೋ ಅವನನ್ನು ಎಳೆದೊಯ್ಯುತ್ತಿತ್ತು. ಅರ್ಧಘಂಟೆ ನಡೆದಿರಬಹುದು. ಆ ಹೊತ್ತಿಗೆ ಒಂದು ಮನೆಯ ಮುಂದೆ ನಿಂತು, ತಟ್ಟಿದನು....ಬಾಗಿಲು ತೆರೆಯಿತು. ನಗುಮೊಗದ ಸ್ವಾಗತವೂ ಸಿಕ್ಕಿತು. ಒಳಗೆಹೋಗಿ ಹಾಸಿದ ರತ್ನಕಂಬಳಿಯ ಮೇಲೆ ಕುಳಿತನು. ತಾನು ಮಾತನ್ನಾರಂಭಿಸಲಾಗದೆ ಸುಮ್ಮನಿದ್ದನು.

'ಇಂದು ಬಂತೇನು ರಾಯರಿಗೆ ದಯೆ ?'

ಮುಕುಂದನಿಗೆ ಮಾತಿನ ಬಾಗಿಲು ತೆರೆದಂತಾಯಿತು. ಏನಾಡಬೇಕೆಂದು ಅವನಿಗೆ ತಿಳಿಯದಿರಲಿಲ್ಲ. ಇಂತಹ ಸನ್ನಿವೇಶಗಳು ಹೊಸವಲ್ಲ. ಆದರೆ ಆ ಅಭ್ಯಾಸ ತಪ್ಪಿಹೋಗಿತ್ತು. ಮೂರುವರ್ಷಗಳ ಹಿಂದೆ ಈ ಜೀವನದ ಕೊನೆ ಮೆಟ್ಟಿಲ ತನಕ ಹೋಗಿದ್ದ....ಅಲ್ಲಿಂದ ಮುಂದೆ ಪ್ರಪಾತ. ಆಗ ಒಂದು ಶುಭ್ರಬೆಳಕು ಅವನ ಕೈಹಿಡಿದು, ಜೋಪಾನವಾಗಿ ಮೆಟ್ಟಿಲಿಳಿಸಿ ಬೇರೆಯ ಹಂತವೊಂದನ್ನು ಹತ್ತಿಸಿತ್ತು. ಅಲ್ಲಿ ಒಂದು ಬಗೆಯ ಸೌಖ್ಯದ ಅನುಭವವಾಗಿತ್ತು. ಎರಡು ಜೀವನಗಳ ಸೌಖ್ಯವನ್ನೂ ಅನುಭವಿಸಿ, ಒಂದಕ್ಕೊಂದನ್ನು ಹೋಲಿಸಿದ್ದನು. ಒಂದು, ಒಳ್ಳೆಯ ದೀವಿಗೆಗೆ ತುಂಬ ತೈಲವೆರೆದು, ಒಳ್ಳೆಯ ಬತ್ತಿಯನ್ನು ಹಾಕಿಟ್ಟು ಹತ್ತಿಸಿದ ಬೆಳಕು, ಇನ್ನೊಂದು ಕತ್ತಲೆಯಿಂದು ಉಟ್ಟ ಧೋತ್ರಕ್ಕೆ ಬೆಂಕಿ ಹಚ್ಚಿದ್ದ ಬೆಳಕು. ಅರೆಕ್ಷಣವಿದ್ದು, ತಾನು ಬಂದಿದ್ದ ಹೋದ ಗುರುತನ್ನು ಬಿಟ್ಟು ಹೋಗುವ ಬೆಳಕನ್ನೂ; ಬೆಳಗಿ, ಯಾರಿಗೂ ಯಾವ ಬಗೆಯ ಅಹಿತವನ್ನೂ ಎಸಗದೆ ಬಂದಂತೆಯೇ ಒಂದು ಬಗೆಯ

ಅನುಪಮತೇಜದಿಂದ ಹೋಗುವ ಬೆಳಕನ್ನು ಹೋಲಿಸಿ ನೋಡಿಕೊಂಡನು. ಈ ಯೋಚನೆಗಳ ಪರಂಪರೆಯಲ್ಲಿ ಕೇಳಿದ ಪ್ರಶ್ನೆಗೆ ಉತ್ತರವೇ ಕೊಡದಿರಲು ಮತ್ತೆ—

‘ಏನು ಯೋಚನೆ ರಾಯರೇ, ಮಾತನಾಡಬಾರದೇನು?’

‘ಇಲ್ಲಾ ಗಂಗಾ, ಯೋಚನೆಯೇನು?....ಯೋಚನೆಯಿದ್ದರೂ ಅದನ್ನು ಪರಿಹರಿಸುತ್ತೀ ಅಂತಲ್ಲವೇ ಇಲ್ಲಿಗೆ ಬಂದದ್ದು.’

‘ಹೌದು ಹೌದು ಇಷ್ಟುದಿವಸವೂ ಈ ದಾರಿಯಲ್ಲೇ ಹೋದರೂ ಕಣ್ಣು ಮಾತ್ರ ಈ ಕಡೆ ತಿರುಗಿಸುತ್ತಿದ್ದರೇನೋ....ಕಾಲು ಮತ್ತೆಲ್ಲಿಗೋ ಹೋಗುತ್ತಿತ್ತು.’

‘ಅಂತಹವುದೇನೂ ಇಲ್ಲ. ಎಲ್ಲಿಗೂ ಹೋಗುವ ಅಭ್ಯಾಸವಿಟ್ಟಿಲ್ಲ ಅಷ್ಟೇ.’

‘ಹಾ! ಹಾ!! ಎಷ್ಟು ಚೆನ್ನಾಗಿ ಹೇಳ್ತೀರೋ. ನಿಮಗೆ ನಾನು ಹೊಸಬಳು ರಾಯರೇ. ಆದರೆ ತಮ್ಮ ವಿಚಾರ ಎಲ್ಲಾ ನಾನು ಬಲ್ಲೆ. ಸಿನೀಮಾಗೆ ದಿನಾಗಲೂ ತಮ್ಮ ಜೊತೆ ಬರುವ ಆಕೆ ಯಾರು-ಕುಟುಂಬಾನೋ?’

‘ಹೌದು. ಆ ವಿಚಾರ ನಿನಗೆ ಯಾತಕ್ಕೇ?’

‘ಇಲ್ಲ. ಸುಮ್ಮನೆ ಕೇಳಿದೆ.’

ಕುಟುಂಬದ ಜ್ಞಾಪಕ ಬಂದಿತು. ಈಕೆಯ ಹಾಗೆ ರತ್ನಳೂ ಕೇಳಿದರೆ ಏನು ಉತ್ತರ ಕೊಡುವುದು ಎಂದು ಚಿಂತಿಸಿದನು. ಈಗಲೂ ಮನೆಗೆ ಹೋಗಿಬಿಡಲೇ ಎಂದು ಯೋಚಿಸಿದನು. ಆದರೆ ಶಿಷ್ಟಸಂಪ್ರದಾಯವೆಂಬ ಹೇಡಿತನದ ಕಗ್ಗತ್ತಲು ಕವಿಯಿತು. ಈ ಕತ್ತಲಿನಲ್ಲಿ ಕಣ್ಣು ಕಾಣುವುದು ಗಂಗೆಯಂತಹ ಗೂಗೆಗಳಿಗೆ!!

ಮುಂದಿನ ಮಾತುಕತೆಗಳು ನಡೆದವು. ಕಿಸೆಯಿಂದ ನೋಟೊಂದನ್ನು ತೆಗೆದು ಅವಳ ಕಯ್ಯಲ್ಲಿಟ್ಟನು. ಮೊದಲನೆಯ ಬಿಂಕ ಬಿಗುಮಾನಗಳು ‘ಸರಸ್ವತೀ ರೂಪಿಣೀ ಲಕ್ಷ್ಮಿಯ’ ಸ್ಪರ್ಶದಿಂದ ಬಿನ್ನಾಣ, ಬೆಡಗು, ಸಲಿಗೆಗಳಿಗೆಡೆಕೊಟ್ಟಿತು. ಎಷ್ಟೋ ದಿವಸದ ಗೆಳೆಯರನ್ನು ಆದರಿಸುವಂತೆ ತನ್ನ ನವನಾಯಕನ ಭುಜದಮೇಲೆ ಕೈಹಾಕಿ ಒಳಕ್ಕೆ—ರಸಮಂದಿರಕ್ಕೆ ಭೋಗಸದನಕ್ಕೆ-ಕರೆದೊಯ್ದಳು.

೩

ಮುಕುಂದನು ಮನೆಗೆ ಹಿಂದಿರುಗುತ್ತಿದ್ದಾಗ ರಾತ್ರಿ ೧೧ ಘಂಟೆ ಹೊಡೆಯುತ್ತಿತ್ತು. ಭಾರವಾದ ಮನಸ್ಸನ್ನು ಹಗುರಮಾಡಹೋಗಿ ಮತ್ತೂ ಭಾರವಾದ ಹೊರೆಯನ್ನು ಹೊತ್ತು ಹೋಗುತ್ತಿದ್ದನು. ಹೊತ್ತು ಮೀರಿ ಮನೆಗೆ ಅವನು ಹೋಗುತ್ತಿದ್ದುದೂ ಇದೇ ಮೊದಲಲ್ಲ, ಆದರಾಗ ಜೊತೆಗೆ ರತ್ನಳೂ ಇರುತ್ತಿದ್ದಳು. ಅವಳ ಚಿರ ಉತ್ಸಾಹದ ಮಾತುಗಳಿಗೆ ಮಾರುತ್ತರ ಹೇಳುವುದರಲ್ಲಿ ಹೊತ್ತೂ ಹಾದಿಯೂ ಎರಡೂ ಕಳೆಯುವುದು ಗೊತ್ತಾಗು ಗುತ್ತಿರಲಿಲ್ಲ. ಒಮ್ಮೊಮ್ಮೆ ಎಲ್ಲವನ್ನೂ ತಿಳಿದಂತೆ ನಟಿಸುತ್ತಾ ತನ್ನ ಉತ್ತರ ವನ್ನು ಎದುರಿಸುತ್ತಿದ್ದ ತುಂಟ ಠೀವಿಯನ್ನೊಮ್ಮೆ ನೆನೆಯುವನು; ಮತ್ತೊಮ್ಮೆ ತಾನು ಸೋಲಬೇಕಾಗಿ ಬಂದಾಗ ದೊಡ್ಡದೊಡ್ಡ ಹೆಸರುಗಳನ್ನು ಹೇಳಿ ಅವಳ ಬಾಯಿಮುಚ್ಚಿಸುತ್ತಿದ್ದುದನ್ನು ನೆನೆಯುವನು. ಜೀವನವು........ಅದ ರಲ್ಲಿಯೂ ದಾಂಪತ್ಯಜೀವನವು ಮಕ್ಕಳಾಡುವ ‘ ಹಿಡಿಯುವ ಆಟ ’ವಂತೆ! ಗಂಡೊಮ್ಮೆ ಸಿಕ್ಕಿಬೀಳುವುದು ; ಹೆಣ್ಣೊಮ್ಮೆ ಸಿಕ್ಕಿಬೀಳುವುದು. ಆದರೆ ಈ ಆಟದಲ್ಲಿ ಮೇಲುಕೀಳುಗಳ ಭಾವನೆಯಿಲ್ಲ. ಗೆದ್ದವರೆಷ್ಟು ಗಣ್ಯರೋ ಸೋತ ವರೂ ಅಷ್ಟೇ ಸನ್ಮಾನಿತರು. ಮುಕುಂದನ ಮನಸ್ಸು ಪ್ರಫುಲ್ಲ ವಿಚಾರಗಳ ಚರ್ಚೆಯಲ್ಲಿ ತೊಡಗಿತು. ಮಾತುಗಾರಿಕೆಯ ಸರಿತಪ್ಪುಗಳಿಗೂ ಜೀವ ನದ ಸಮಸ್ಯೆಗಳಿಗೂ ಎಷ್ಟೋಬಾರಿ ವಿಶಾಲವಾದ ಅಂತರವೇರ್ಪಡುತ್ತ ದೆಂಬುದರ ಅರಿವು ಮುಕುಂದನಿಗೆ ಹೊಳೆಯುತ್ತ ಬಂದಿತ್ತು. ಈ ತೊಡಕು ಗಳ ಗೊಡವೆಯೇಕೆಂದು ಅವುಗಳನ್ನು ಮರೆಯಲೆತ್ನಿಸಿದರೂ ಪದೇಪದೇ ಅವೇ ಎದ್ದು ಎದುರಿಗೆ ನಿಲ್ಲುತ್ತಿದ್ದವು.

ಯೋಚಿಸುತ್ತಲೇ ಮುಂದೆ ನಡೆದನು. ತಾನು ಮಾಡಿದ್ದು ಧರ್ಮವೇ? ರತ್ನಾ ತನ್ನ ಮಾತು ಮೀರಿ ಮಗುವನ್ನು ಕರೆದೊಯ್ದುದಂತೂ ಶುದ್ಧ ತಪ್ಪು ಅವಳೂ ಒಪ್ಪಬಹುದು. ಒಪ್ಪುವಳೇ—ಹಟಮಾರಿ....ಅವಳು ಒಪ್ಪಲಿ ಒಪ್ಪದಿರಲಿ ಮಾಡಿದ್ದು ಶುದ್ಧ ತಪ್ಪು. ಆದರೆ ತಾನೀಗ ಪ್ರತೀಕಾರ ಮಾಡ ಹೋಗಿ ಮಾಡಿದ್ದು ಸರಿಯೋ? ಯಾಕಾಗಬಾರದು? ಅವಳು **ಆ ತಪ್ಪನ್ನು** ಮಾಡದಿದ್ದರೆ ತಾನು **ಈ ತಪ್ಪಿನ** ಗೋಜಿಗೆ ಹೋಗುತ್ತಲೇ ಇರಲಿಲ್ಲ. ಆದ್ದರಿಂದ ತಾನು ಮಾಡಿದ್ದು ಸರಿಯೆಂದು ಮನಸ್ಸನ್ನೊಡಂಬಡಿಸಲು ಯತ್ನಿ

ಸಿದನು....ಆದರೆ ಅದು ಒಡಂಬಡದು. 'ನೀನು ಮಾಡಿದ್ದು ತಪ್ಪು, ಬುದ್ಧ ತಪ್ಪು' ಎಂದು, ಬಿಡದೆ ಬಾರಿಸುವ ಅಲಾರಂ ಗಂಟೆಯಂತೆ ಒತ್ತಿಯೊತ್ತಿ ಹೇಳುತ್ತಲೇ ಇತ್ತು. ಆದರೆ ಈ ಪ್ರತೀಕಾರ ಯಾರಿಗೆ ಆದಹಾಗಾಯಿತು. ಮಗು ಬೆಂಕಿಯನ್ನು ಮುಟ್ಟಿ ಕೈ ಸುಟ್ಟುಕೊಳ್ಳಬಹುದೆಂದು ತಾನೇ ಕಡ್ಡಿ ಗೀರಿ ಅದರ ಕೈಯನ್ನು ಸುಡಬಹುದೇ? ಈಗ ಹಾಗೆ ಮಾಡಿದಂತಾಯಿತು ಎಂದುಕೊಂಡನು. ತಾನು ತುಸು ಸಮಾಧಾನಚಿತ್ತನಾಗಿ, ಕೋಪಬಂದಾಗ, ಪ್ರತೀಕಾರದ ಆಸೆಹುಟ್ಟಿದಾಗ ಪೂರ್ವಾಪರಗಳನ್ನು ಸ್ವಲ್ಪ ಯೋಚಿಸಿದ್ದರೆ ಈ ವಿಷಾದಕ್ಕೆ ಅವಕಾಶವಾಗದಿರುತ್ತಿದ್ದಿತಲ್ಲಾ ಎಂದುಕೊಂಡನು.

ತಾನು ತಿಳಿತಿಳಿದು ಮನಃಪೂರ್ವಕವಾಗಿ ಮಾಡಿದ ಅಪರಾಧಕ್ಕೆ ಪರಿತಾಪವೇತಕ್ಕೆಂದು ಸಮಾಧಾನ ಪಡಿಸಿಕೊಳ್ಳಲೆತ್ನಿಸಿದನು. ಆ ಮರುಕ್ಷಣವೇ ಬೇರೊಂದು ಯೋಚನೆಯು ಮನಸ್ಸನ್ನು ಕದಡಿಬಿಟ್ಟಿತು. ಆ ನೆನಪಿನಿಂದಲೇ ಚಕಿತನಾಗಿ, ಬೆವರ್ಮಿಡಿಯುತ್ತ ಜೀವರಹಿತನಾದಂತೆ ಕಂಡುಬಂದನು. 'ನಾನು ಪ್ರತೀಕಾರದ ನೆಪ ಹೂಡಿ ಹೀನವಾದ ಮನಃಪ್ರವೃತ್ತಿಯ ಪ್ರಕಾಶಕ್ಕೆ ಅವಕಾಶವಿತ್ತೆ, ಹಾಗೇ-ರತ್ನಳೂ ನನ್ನ ಮೇಲಿನ ಯಾವದಾದರೊಂದು ಕೋಪದಿಂದ, ನನಗೆ ಪ್ರತೀಕಾರಮಾಡಲು ಅದೇರೀತಿ ನಡೆದರೋ?' ಆಗ ಆದರ್ಶಮಹಿಳೆಯರ ಪಡಿಯಚ್ಚಾದ ರತ್ನಾ ಹಾಗೆಮಾಡಳೆಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡನು.

ಈ ವೇಳೆಗೆ ಮುಕ್ಕಾಲು ದಾರಿ ಸವೆದಿತ್ತು. ವಿಷಾದಮೂಡಿ ಮನಸ್ಸು ಮುಕ್ಕಾಲು ಹಣ್ಣಾಗಿತ್ತು. ಜೀವನದಲ್ಲಿ ವಿವಾಹವು ಎಂತಹ ಘಟಿಕಾಸ್ಥಾನವಾಗಿ ಪರಿಣಮಿಸುವುದೆಂದು ಚಿಂತಿಸಿದನು. ವಿವಾಹಪೂರ್ವದ ಜೀವನದಲ್ಲಿ ಯಾವದು ನಿತ್ಯನಡತೆಯಾಗಿತ್ತೋ ಅದುವಿಂದು ಪಾಪಮಯವಾಗಿ ತನಗೆ ಕಂಡುಬಂದದ್ದಕ್ಕೆ ಆಶ್ಚರ್ಯಗೊಂಡನು.

ಮನೆಯೂ ಸಿಕ್ಕುವುದು....ರತ್ನಳನ್ನೂ ಕಾಣುವೆ. ಮಾಡಿದ ದೋಷವನ್ನು ಒಪ್ಪಿಕೊಂಡು ಕ್ಷಮೆಬೇಡಲೇ? ಬೇಡಿದರೆ ಮನಸ್ಸು ಹಗುರವಾಗಿಬಿಡುವುದು-ಬೇಡುವಷ್ಟು ಧೈರ್ಯವೂ ಮುಕುಂದನಿಗಿತ್ತು. ಆದರೆ ರತ್ನಳ ಪ್ರಕೃತಿಗೆ ಅದು ಸರಿಹೊಂದಲಾರದು. ಎಂದೋ ಆದ ಎಡವು ಪೆಟ್ಟಿಂ ನಿಂತು

ರಕ್ತಸ್ರಾವ ಮಾಡಿಮಾಡಿ ಜೀವವನ್ನೇ ಅಪಹರಿಸಿಬಿಡಬಹುದು. ಪಾಪದ ಕುಪಿಯನ್ನು ಒಡಲಲ್ಲಿ ಇಟ್ಟುಕೊಂಡು ಬಾಳುವುದಾದರೂ ಹೇಗೆ? ತನಗೆ ಪಶ್ಚಾತ್ತಾಪ ಹುಟ್ಟಲು ಇದೇ ಶಿಕ್ಷೆ ವಿಧಾಯಕವಾಗಿರಬಹುದು. ಎಂದು ಕೊಂಡೇ ಹೊರಟ. ಮನೆಯು ಹತ್ತಿರ ಹತ್ತಿರವಾಗುತ್ತ ಬಂತು.

೪

ರತ್ನಮ್ಮನಿಗೆ ಮನೆಯನ್ನು ಬಿಟ್ಟು ಹೊರಡುವಾಗಿದ್ದ ಮನಃಸ್ಥೈರ್ಯವೂ, ಗಂಡನ ಸೊಕ್ಕಿಗೆ ತಕ್ಕ ಮಟ್ಟುಗೋಲನ್ನು ಹಾಕಬೇಕೆಂಬ ಛಲವೂ ಸೂರಪ್ಪನವರ ಮನೆಯ ಹೊಸಲನ್ನು ಮುಟ್ಟಿದ ತಕ್ಷಣವೇ ಎಲ್ಲಿಗೋ ಮಾಯವಾಗಿ ಹೋಯಿತು. ಅಲ್ಲಿ ಹೇಗೆ ಕಾಲವನ್ನು ಕಳೆದಳೋ ಅವಳೇ ಬಲ್ಲಳು!! ಆದರೆ ರತ್ನನ ರತ್ನದಂತಹ ಮುಖದಮೇಲೆ ಮೂಡಿದ್ದ ಮೋಡದ ಕಪ್ಪನ್ನು ಯಾರೂ ಮೆಚ್ಚಲಿಲ್ಲ. ಅಂತೂ ಅತಿಥಿಪಾತ್ರವನ್ನು ತಕ್ಕಂತೆ ಅಭಿನಯಿಸಿ ಹಿಂದಿರುಗಿದಳು. ಮುಕುಂದನು ಕೊಟ್ಟಿದ್ದ ಎಚ್ಚರವನ್ನು ಜ್ಞಾಪಿಸಿಕೊಂಡು ಮಗುವಿನ ಮುಖನೋಡಿದಳು. ಸೀತಮುಚ್ಚಿನ್ಯೆ ತುಸು ಬೆಚ್ಚಗೂ ಆಗಿತ್ತು. ಗಂಡ ಮನೆಗೆ ಬಂದರೆ ತನ್ನಪಾಡು ಏನಾಗಬಹುದೆಂಬುದರ ಕಡೆಗೆ ರತ್ನಮ್ಮನ ಮನಸ್ಸು ಹೋಗಲಿಲ್ಲ. ತನ್ನ ಹಟಮಾರಿತನದಿಂದ ಮಗುವಿಗೆ ಹಿಂಸೆಯಾಯಿತಲ್ಲಾ ಎಂದು ಸಂತಾಪಗೊಂಡಳು. ಅತ್ತೆಯವರೆಷ್ಟು ಸಮಾಧಾನ ಹೇಳಿದರೂ ಅಳುವು ನಿಲ್ಲದು. ಅತ್ತು ಅತ್ತು ರತ್ನಮ್ಮ ಸೋತುಹೋಗಿದ್ದಳು.

೯ ಘಂಟೆ ಹೊಡೆಯಿತು....ಹತ್ತೂ ಆಯಿತು....ಹನ್ನೊಂದೂ ಬಾರಿಸಿತು. ನೂರಾರುಬಾರಿ ಎದ್ದುಹೋಗಿ ಬಾಗಿಲು ತೆಗೆದು ಬಂದರೇನೋ ಎಂದು ನೋಡುವಳು. ಬರಲಿಲ್ಲ....ಬರುವುದೇ ಇಲ್ಲವೇನೋ ಎಂಬ ಯೋಚನೆ ಹುಟ್ಟಿತು. ಎಂತಹ ಕೆಲಸವನ್ನು ಮಾಡಿದೆ ಎಂದು ದಡದಡನೆ ದೇವರ ಮನೆಗೆ ತೆರಳಿ ನಂಜುಂಡೇಶ್ವರನಿಗೆ ತುಪ್ಪದ ದೀಪವನ್ನು ಹಚ್ಚಿಟ್ಟು ಅಡ್ಡಬಿದ್ದು 'ಇಂದವರು ಸೌಖ್ಯವಾಗಿ ಮನೆಗೆ ಬಂದುಬಿಟ್ಟರೆ ತಾನೆಂದೆಂದಿಗೂ ಅವರ ಮಾತಿಗೆ ಪ್ರತಿಹೇಳೆನು ಸ್ವಾಮಿ. ಬೇಗ ಅವರು ಎಲ್ಲಿದ್ದರೂ ಮನೆಗೆ ಕರೆದು ಕೊಂಡು ಬಾ' ಎಂದು ಬೇಡಿಕೊಂಡಳು. ಬಾಗಿಲು ಶಬ್ದವಾಯಿತು....ಹಾರಿ

ಬಾಗಿಲುತೆರೆದು ನೋಡಿದಳು. ಗಾಳಿಯ ಬರಿಗಲಭೆಯೆಂದು ನಿರ್ವಿಣ್ಣಳಾಗಿ ಹಿಂದಿರುಗಿದಳು. ಈ ವೇಳೆಗೆ ಮಗು ಅತ್ತಂತಾಯಿತು. ತೊಟ್ಟಿಲು ತೂಗುತ್ತ ನಿಂತಳು. ಎಡಕ್ಕೈಯಮೇಲೆ ತಲೆಯೊರಗಿದೆ. ಕುಪ್ಪಸದ ತೋಳೆಲ್ಲಾ ನೆನೆನೆನೆದು ಒದ್ದೆಮುದ್ದೆಯಾಗಿದೆ. ಮತ್ತೆ ಬಾಗಿಲು ತಟ್ಟಿದ ಶಬ್ದ ಕೇಳ ಬಂತು. ಗಾಳಿಯ ಮೋಸವೆಂದು ಸುಮ್ಮನಾದಳು. ಮತ್ತೆ ಕೇಳಬಂತು. ಹೋಗಿ ತೆಗೆಯಲು ಮುಕುಂದನೇ....ಒಳಕ್ಕೆ ಬಂದ.

ಆತುರವೆಂಬ ಕಾಡಿಗೆ ಸಂತೋಷವೆಂಬ ಕಿಚ್ಚಿಕ್ಕಿದಂತಾಯಿತು. ಮುಕುಂದ ಬಟ್ಟೆ ಬಿಚ್ಚಿಟ್ಟು ಹೆಂಡತಿಯ ಕಡೆ ನೋಡಿದ. ಮೊದಲೇ ದೊಡ್ಡ ದಾದ ಬಗಸೆಗಂಗಳಲ್ಲಿ ಪರಿತಾಪ ಪ್ರವಾಹ ನಿಂತು, ದೊಡ್ಡ ನೆರೆಬಂದಂತಾ ಗಿತ್ತು. ಮಾತನ್ನು ಎಂತು ಆರಂಭಿಸಲಿ ಎಂದು ಯೋಚಿಸತೊಡಗಿದನು. ರತ್ನಳೂ ಆಗ ಅದನ್ನೇ ಯೋಚಿಸುತ್ತಿದ್ದುದು. ಇಬ್ಬರೂ ಚಿಂತೆ ಸಂದಿಗ್ಧ ಗಳಿಗೆ ಸಿಲುಕಿ ಏನುಮಾಡಬೇಕೆಂದು ತೋರದೆ ಕಲ್ಲುಬೊಂಬೆಗಳಂತೆ ನಿಂತಿ ದ್ದರು. ಮಗುವು ಅತ್ತ ಶಬ್ದ ಕೇಳಬಂತು. ಮುಕುಂದನೆದ್ದು ತೊಟ್ಟಿಲ ಬಳಿಗೆ ಹೋಗಿ ತನ್ನ ಮಗುವನ್ನು ಪ್ರೇಮದಿಂದೆತ್ತಿ ಎದೆಗಪ್ಪಿಕೊಂಡನು.... ಅದು ಮತ್ತೂ ಗಟ್ಟಿಯಾಗಿ ಅಳಲಾರಂಭಿಸಿತು. ಅದರ ಮುಖವನ್ನು ದಿಟ್ಟಿಸಿ ನೋಡಿದನು. ಶೀತದ ಬಾಧೆಯಿಂದ ನರಳುತ್ತಿದ್ದುದು ಕಂಡುಬಂತು. ಮಗು ವನ್ನು ಸಮಾಧಾನಮಾಡಲು ಹತ್ತಿರಬಂದ ರತ್ನಳ ಕೈಗೆ ಮಗುವನ್ನಿತ್ತು ಹೆಂಡತಿಯನ್ನು ನೆಟ್ಟನೋಟದಿಂದ ನೋಡಿದನು.

ಈ ವರೆಗೆ ರತ್ನಮ್ಮ ಹೇಗೋ ಅಳುವಿನ ಕಟ್ಟೆಯನ್ನು ಕಾಪಾಡಿ ಕೊಂಡಿದ್ದಳು. ಈಗದು ಅವಳ ಶಕ್ತಿಯನ್ನು ಹಾರಿಸಿ ಮುಂದೆ ಹರಿದುಬಿಟ್ಟಿತು. ಪತ್ನಿಯನ್ನು ಹತ್ತಿರ ಸೆಳೆದು, ಅಪ್ಪಿ....

'ರತ್ನಾ. ಅಳಬೇಡ ಚಿನ್ನಾ....ಹೋಗಲಿ ಬಿಡು.'

'ನನ್ನ ಕ್ಷಮಿಸಿ. ನಿಮ್ಮ ಮಾತು ಮೀರಿದ್ದು ದೊಡ್ಡ ತಪ್ಪಾಯಿತು. ಇದೇ ಕೊನೆ ಇನ್ನುಮೇಲೆ ನಿಮ್ಮಮಾತು....'

ಮುಂದೆ ಹೇಳಲಾರದಾದಳು. ಹೇಳದಿದ್ದುದೇ ಒಳ್ಳೆಯದಾಯಿ ತೆಂದು ಮುಕುಂದನೆಂದುಕೊಂಡನು. 'ತನ್ನಪರಾಧವನ್ನೊಪ್ಪಿಕೊಂಡು ಕ್ಷಮೆ

ಬೇಡಲೇ' ಎಂದಂದುಕೊಂಡನು. ಆಗ 'ಬೇಡಬೇಡ, ಅನರ್ಥಕಾರಿಯಾದ ಘೋರ ಸತ್ಯಕ್ಕಿಂತಲೂ ಈಗ ಸುಖಕಾರಿ ಅಸತ್ಯವೇ ಲೇಸೆಂದು' ಮನಸ್ಸಿಗನಿಸಿತು.

ಮುಕುಂದನ ನೀರವತೆಯನ್ನು ಕಂಡು ಅವನ ಮುನಿಸಿನ್ನೂ ಇಳಿದಿಲ್ಲವೆಂದು ರತ್ನಮ್ಮ ಭಾವಿಸಿದಳು. ಮಗುವನ್ನು ಮಲಗಿಸಿ ಬಂದು,

'ಕೋಪ ಇನ್ನೂ ಇಳಿಯಲಿಲ್ಲವೇನು? ಮಾಡಿದು ತಪ್ಪೆಂದು ಕೇಳಿಕೊಂಡರೂ ಕ್ಷಮಿಸಬಾರದೇ?'

ಸ್ವಲ್ಪಹೊತ್ತು ರತ್ನಮ್ಮನ ಮುಖವನ್ನು ನೋಡಿ 'ರತ್ನಾ, ಕ್ಷಮಿಸಬೇಕಾದವನು ನಾನಲ್ಲ, ನೀನು. ನಿನ್ನ ವಿಚಾರದಲ್ಲಿ ನಾನು ಮಹಾಪರಾಧಿ.'

ರತ್ನಮ್ಮ ಆಗ ಪತಿಯು ಮನೆಗೆ ಹೊತ್ತುಮೀರಿ ಬಂದದ್ದಕ್ಕೆ ಹಾಗನ್ನುತ್ತಿರುವನೆಂದು ಭಾವಿಸಿಕೊಂಡು ಗಂಡನ ಸರಳತೆಗೆ ಮನಸ್ಸಿನಲ್ಲಿಯೇ ವಂದಿಸಿದಳು.

'ಅದುಸರಿ, ಕೋಪಬಂದರೆ ರಾತ್ರಿ ೧೨ ಘಂಟೆ ತನಕ ಪ್ರೋಲಿ ಅಲೆಯಬೇಕೇನು? ಮನೆಗೇ ಬೇಗಬಂದು ಕೋಪಮಾಡಿಕೊಂಡು ಕೂತ್ಕೋಬಾರದೇ?' ಎಂದಳು.

ಮುಕುಂದನು ಉಕ್ಕಿಬರುತ್ತಿದ್ದ ಶೋಕವನ್ನು ತಡೆದು ನಗುನಗುತ್ತಾ 'ಇನ್ಮೇಲೆ ಹಾಗೇ ಆಗಲಿ ಚಿನ್ನಾ' ಎಂದಂದು ಭರದಿಂದಪ್ಪಿದನು.

ರತ್ನಮ್ಮನ ಎದೆಯ 'ಡಬಡಬ'ರವವು 'ಇನಿಯಾ, ಇಂತಹ ವಂಚನೆಯನ್ನು ಮಾಡಬಹುದೇ' ಎಂದನ್ನುವಂತಿತ್ತು. ಮುಕುಂದನ ಎದೆಯು 'ಇಂದು ಬೇಡ, ಮುಂದೊಂದು ದಿವಸ ನನ್ನ ತಪ್ಪನ್ನೊಪ್ಪಿಕೊಳ್ಳುವೆ' ಎಂದು ಉದ್ವೇಗಗೊಂಡು ಉತ್ತರವಿತ್ತಿತು.

*    *    *    *    *    *

ಸತ್ಯದೇವಿಯು ಪ್ರೇಮಮಾತೆಯ ಎದುರಿಗೆ ಪರಾಜಯಗೊಂಡಳು. ಆದರೇನು? ಇವೆಲ್ಲ ಅವರಿಗೂ ಒಂದು ಬಗೆಯ 'ಹಿಡಿಯುವ ಆಟ' ಗಳೇ ಅಲ್ಲವೆ.